# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೧<br>Volume 151 | ಬೆಂಗಳೂರು, ಗುರುವಾರ, ಅಕ್ಟೋಬರ್ ೨೭, ೨೦೧೬ (ಕಾರ್ತಿಕ ೫, ಶಕ ವರ್ಷ ೧೯೩೮)<br>Bengaluru, Thursday, October 27, 2016 ( Karthika 5, Shaka Varsha 1938) | ಸಂಚಿಕೆ ೪೨<br>Issue 42 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಕಿರಣ್ ಕಟ್ಟಿಮನಿ, ಗುತ್ತಿಗೆ ಕಿರಿಯ ಪ್ರಯೋಗಶಾಲಾ ತಂತ್ರಜ್ಞರು, ಇವರನ್ನು ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶದ ಸಂಖ್ಯೆ: ಆಕುಕ 253 ಸಿಜಿಇ 1999, ದಿನಾಂಕ: 13–01–2000.
2. ಬೆಳಗಾಂ ಜಿಲ್ಲಾಧಿಕಾರಿ ಕಛೇರಿಯ ಅಧಿಕೃತ ಜ್ಞಾಪನ ಸಂಖ್ಯೆ: ಕಂಶಾ: ಸಿಬ್ಬಂದಿ–11: ಆರೋಗ್ಯ: ವಿವ:35:99–2000, ದಿನಾಂಕ: 31–07–2000.
3. ಅಧಿಸೂಚನೆ ಸಂಖ್ಯೆ: ಆಕುಕ 266 ಸಿಜಿಇ 2003, ದಿನಾಂಕ: 02–12–2005.
4. ಅಧಿಸೂಚನೆ ಸಂಖ್ಯೆ: ಆಕುಕ 266 ಸಿಜಿಇ 2003, ದಿನಾಂಕ: 16–03–2006.
5. ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಪತ್ರ ಸಂಖ್ಯೆ: ಸಿಬ್ಬಂದಿ (2) 666:2005–06, ದಿನಾಂಕ: 05–04–2006.
6. ಕೆ.ಎ.ಟಿ. ಅರ್ಜಿ ಸಂಖ್ಯೆ: 5533/2013 ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ತೀರ್ಪು ದಿನಾಂಕ: 27–02–2015.
7. ನಿರ್ದೇಶಕರು, ಆಕುಕ (ಸೇವೆಗಳು) ಇವರ ಪತ್ರ ಸಂಖ್ಯೆ: ಡಿಹೆಚ್ಎಸ್/ ಇಎಸ್ಎಮ್/66(ಬಿ)/99–2000, ದಿನಾಂಕ: 22–12–2015.

**ಪ್ರಸ್ತಾವನೆ :**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಖಾಲಿ ಇರುವ ಅರೆ ವೈದ್ಯಕೀಯ ಮತ್ತು ವಾಹನ ಚಾಲಕರ ಸೇವೆಯನ್ನು ಒಂದು ವರ್ಷದ ಅವಧಿಗೆ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಿಕೊಳ್ಳಲು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 13–01–2000ದ ಸರ್ಕಾರಿ ಆದೇಶದಲ್ಲಿ ಆಯಾ ಜಿಲ್ಲಾಧಿಕಾರಿಗಳಿಗೆ ಆದೇಶಿಸಲಾಗಿತ್ತು.

ಆ ಮೇರೆಗೆ ಬೆಳಗಾಂ ಜಿಲ್ಲೆಯಲ್ಲಿ ಖಾಲಿ ಇದ್ದ ಕಿರಿಯ ಪ್ರಯೋಗಾಲಯ ತಂತ್ರಜ್ಞರ/ಕ್ಷಕಿರಣ ತಂತ್ರಜ್ಞರ ಮತ್ತು ನೇತ್ರ ಸಹಾಯಕರ ಹುದ್ದೆಗಳನ್ನು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 31–07–2000ದ ಅಧಿಕೃತ ಜ್ಞಾಪನದಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಲಾಗಿತ್ತು. ಇದರಲ್ಲಿ ಶ್ರೀ ಕಿರಣ ಎಂ ಕಟ್ಟಿಮನಿ ಇವರು ಕಿರಿಯ ಪ್ರಯೋಗಾಲಯ ತಜ್ಞರಾಗಿ ನೇಮಕಗೊಂಡು ಬೆಳಗಾಂ ಜಿಲ್ಲೆಯ, ಸೌದತ್ತಿ ತಾಲ್ಲೂಕಿನ, ಚಚಡಿ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ದಿನಾಂಕ: 05–08–2000 ದಿಂದ ಕರ್ತವ್ಯ ನಿರ್ವಹಿಸುತ್ತಿದ್ದು. ಕಾಲ ಕಾಲಕ್ಕೆ ಇವರ ಗುತ್ತಿಗೆ ನೇಮಕಾತಿ ಅವಧಿಯನ್ನು ಮುಂದುವರೆಸಲಾಗಿರುತ್ತದೆ.

ನಂತರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿದ್ದ ಅರೆ ವೈದ್ಯಕೀಯ ಮತ್ತು ವಾಹನ ಚಾಲಕರ ಸೇವೆಯನ್ನು ಸರ್ಕಾರದ ಸೇವೆಯಲ್ಲಿ ವಿಲೀನಗೊಳಿಸಲು ಆಕ್ಷೇಪಣೆಗಳನ್ನು ಆಹ್ವಾನಿಸಿ ಮೇಲೆ ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ದಿನಾಂಕ: 02–12–2005ರ ಕರಡು ಅಧಿಸೂಚನೆಯನ್ನು ಹೊರಡಿಸಲಾಗಿತ್ತು. ಸದರಿ ಕರಡು ಅಧಿಸೂಚನೆಯಲ್ಲಿ ಶ್ರೀ ಕಿರಣ ಎಂ ಕಟ್ಟಿಮನಿರವರ ಹೆಸರು ಕ್ರಮ ಸಂಖ್ಯೆ: 372 ರಲ್ಲಿರುತ್ತದೆ.

ಮೇಲೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ದಿನಾಂಕ: 16–03–2006ರ ಅಂತಿಮ ಅಧಿಸೂಚನೆಯಲ್ಲಿ 810 ಕಿರಿಯ ಪ್ರಯೋಗಶಾಲಾ ತಜ್ಞರ, 373 ಚಾಲಕರ 33 ಕ್ಷಕಿರಣ ತಜ್ಞರ, ಮತ್ತು 20 ನೇತ್ರ ಸಹಾಯಕರ ಸೇವೆಯನ್ನು ಸರ್ಕಾರದ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ. ಸದರಿ ಅಂತಿಮ ಅಧಿಸೂಚನೆಯಲ್ಲಿ ಶ್ರೀ ಕಿರಣ ಎಂ ಕಟ್ಟಿಮನಿರವರ ಹೆಸರು ಸೇರಿರುವುದಿಲ್ಲ.

ಬೆಳಗಾವಿ ಜಿಲ್ಲೆಯ, ಹುಕ್ಕೇರಿ ತಾಲ್ಲೂಕಿನ, ಇಸ್ಲಾಂಪೂರ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸುತ್ತಿದ್ದ ಶ್ರೀ ಕಿರಣ ವಿಷ್ಣು ಸವದತ್ತಿ, ಇವರು ಅಧಿಕೃತ ಜ್ಞಾಪನ ಸಂಖ್ಯೆ: ವಿಆರ್‌ಸಿ/21/ವಿಎಲ್/2/2005–06, ದಿನಾಂಕ: 24–04–2005 ರಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖಾ ಆಯ್ಕೆ ಸಮಿತಿಯಿಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕಿರಿಯ ಪ್ರಯೋಗ ಶಾಲಾ ತಂತ್ರಜ್ಞ ಹಿಂಬಾಕಿ ಹುದ್ದೆಗಳ (ಬ್ಯಾಕ್‌ಲಾಗ್) ಹೆಚ್ಚುವರಿ ಪಟ್ಟಿಯಲ್ಲಿ ನೇಮಕಾತಿ ಹೊಂದಿರುತ್ತಾರೆ. ಇದರಿಂದಾಗಿ ಶ್ರೀ ಕಿರಣ ವಿಷ್ಣು ಸವದತ್ತಿ, ಇವರ ಹೆಸರನ್ನು ಶ್ರೀ ಕಿರಣ ಎಂ ಕಟ್ಟಿಮನಿ ಎಂದು ತಪ್ಪಾಗಿ ಅರ್ಥೈಸಿ ಸದರಿಯವರ ಹೆಸರು ಅಂತಿಮ ಅಧಿಸೂಚನೆಯಲ್ಲಿ ಬಿಟ್ಟು ಹೋಗಿರುವ ಬಗ್ಗೆ ಬೆಳಗಾವಿಯ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ದಿನಾಂಕ: 05–04–2006ರ ಪತ್ರದಲ್ಲಿ ತಿಳಿಸುತ್ತಾ ಶ್ರೀ ಕಿರಣ ಎಂ ಕಟ್ಟಿಮನಿ ಇವರ ಹೆಸರನ್ನು ರಾಜ್ಯಪತ್ರದಲ್ಲಿ ಪ್ರಕಟಿಸುವಂತೆ ಸರ್ಕಾರಕ್ಕೆ ಮನವಿ ಮಾಡಿರುತ್ತಾರೆ.

ಶ್ರೀ ಕಿರಣ ಎಂ ಕಟ್ಟಿಮನಿ ಇವರು ತಮ್ಮನ್ನು ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸುವಂತೆ ಕೋರಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ದಾವೆ ಹೂಡಿದ್ದು, ಸಂಖ್ಯೆ: 5533/2013ರಲ್ಲಿ ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಶ್ರೀ ಕಿರಣ ಎಂ ಕಟ್ಟಿಮನಿ ಇವರನ್ನು ಸರ್ಕಾರದ ಸೇವೆಯಲ್ಲಿ ವಿಲೀನಗೊಳಿಸಲು ಸೂಕ್ತ ಆದೇಶವನ್ನು ಹೊರಡಿಸುವಂತೆ ಮೇಲೆ ಕ್ರಮ ಸಂಖ್ಯೆ: (6)ರಲ್ಲಿ ಓದಲಾದ ತೀರ್ಪಿನಲ್ಲಿ ಆದೇಶಿಸಿರುತ್ತದೆ.

ಕರ್ನಾಟಕ ನ್ಯಾಯ ಮಂಡಳಿಯ ಆದೇಶದ ಮೇರೆಗೆ ಹಾಗೂ ಬೆಳಗಾಂ ಜಿಲ್ಲಾ ವೈದ್ಯಾಧಿಕಾರಿಗಳ ಶಿಫಾರಸ್ಸಿನಂತೆ ಸಹಜ ನ್ಯಾಯದಡಿ ಈ ಪ್ರಕರಣವನ್ನು ಪರಿಗಣಿಸಿ ಶ್ರೀ ಕಿರಣ ಎಂ ಕಟ್ಟಿಮನಿ, ಕಿರಿಯ ಪ್ರಯೋಗಶಾಲಾ ತಂತ್ರಜ್ಞರು ಇವರ ಸೇವೆಯನ್ನು ಸರ್ಕಾರದಲ್ಲಿ ವಿಲೀನಗೊಳಿಸಲು ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮೇಲೆ ಕ್ರಮ ಸಂಖ್ಯೆ: (7)ರಲ್ಲಿ ಓದಲಾದ ದಿನಾಂಕ: 22–12–2015ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 431 ಸಿಜಿಇ 2013, ಬೆಂಗಳೂರು, ದಿನಾಂಕ: 17–08–2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅಧಿಸೂಚನೆ ಸಂಖ್ಯೆ: ಆಕುಕ 266 ಸಿಜಿಇ 2003, ದಿನಾಂಕ: 16–03–2006ರಲ್ಲಿ ಶ್ರೀ ಕಿರಣ ಎಂ ಕಟ್ಟಿಮನಿ, ಕಿರಿಯ ಪ್ರಯೋಗಶಾಲಾ ತಂತ್ರಜ್ಞರು, ಇವರ ಹೆಸರನ್ನು ಕ್ರಮ ಸಂಖ್ಯೆ: 372ರ ನಂತರ 372(ಎ) ರಲ್ಲಿ ಸೇರ್ಪಡೆಗೊಳಿಸಿ ಸರ್ಕಾರಿ ಸೇವೆಯಲ್ಲಿ ವಿಲೀನಗೊಳಿಸಿದೆ.

ಈ ಆದೇಶವನ್ನು ದಿ: 05–07–2016 ರಂದು ಕಾನೂನು ಕೋಶದ ಮುಖ್ಯಸ್ಥರು ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

**PR - 597**
**SC - 100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಸ್.ವಿ. ಕಲಾವತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ಆರೋಗ್ಯ–1&2)

## ಸಾರಿಗೆ ಸಚಿವಾಲಯ

**ವಿಷಯ :** ಸಚಿವಾಲಯದ ಸಾರಿಗೆ ಇಲಾಖೆಯ ಆಡಳಿತ ನಿಯಂತ್ರಣಕ್ಕೊಳಪಡುವ ಸಾರಿಗೆ ಇಲಾಖೆ ಹಾಗೂ ಸಾರಿಗೆ ಸಂಸ್ಥೆಗಳಿಗೆ ಸಂಬಂಧಿಸಿದ ಕೇಂದ್ರ ಕಛೇರಿಗಳಲ್ಲಿ ಜಾಗೃತ ಕೋಶ ಸೃಜಿಸಿ ಮುಖ್ಯ ಜಾಗೃತ ಅಧಿಕಾರಿಯನ್ನು ನೇಮಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 14 ಸೇಲೋಯು 2016, ದಿನಾಂಕ: 14/03/2016.
2. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 88 ಸೇಲೋಯು 2016, ದಿನಾಂಕ: 22/06/2016.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ 1988 ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹದಳವನ್ನು (Anti Corruption Bureau) ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ, ಕಾರ್ಯವಿಧಾನ/ಮಾರ್ಗಸೂಚಿಗಳನ್ನು ನೀಡಲಾಗಿದೆ. ಮುಂದುವರೆದು, ಸದರಿ ಮಾರ್ಗಸೂಚಿಯನ್ವಯ ಕರ್ನಾಟಕ ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಗಳನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳ ಕೇಂದ್ರ ಸ್ಥಾನದ ಕಛೇರಿಗಳಲ್ಲಿ ಒಂದು ಜಾಗೃತಕೋಶ ರಚಿಸಬೇಕಾಗಿದೆ. ಈ ಜಾಗೃತ ಕೋಶಕ್ಕೆ ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯು ಮುಖ್ಯಸ್ಥರಾಗಿರುತ್ತಾರೆ ಹಾಗೂ ಇಲಾಖಾ/ಸಂಸ್ಥೆಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer next in Seniority) ಮುಖ್ಯ ಜಾಗೃತ ಅಧಿಕಾರಿಯನ್ನಾಗಿ ನೇಮಿಸಬೇಕಾಗಿದ್ದು ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:, ಸಾರಿಇ 52 ಸಾಇಸೇ 2016, ಬೆಂಗಳೂರು, ದಿನಾಂಕ: 12ನೇ ಜುಲೈ 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಚಿವಾಲಯದ ಸಾರಿಗೆ ಇಲಾಖೆಯ ಆಡಳಿತ ನಿಯಂತ್ರಣಕ್ಕೊಳಪಡುವ ಸಾರಿಗೆ ಸಂಸ್ಥೆಗಳಿಗೆ ಸಂಬಂಧಿಸಿದ ಕೇಂದ್ರ ಕಛೇರಿಗಳಲ್ಲಿ ಜಾಗೃತ ಕೋಶ ಸೃಜಿಸಿ ಮುಖ್ಯ ಜಾಗೃತ ಅಧಿಕಾರಿಯನ್ನು ನೇಮಿಸುವ ಕುರಿತು ಮುಂದೆ ನಮೂದಿಸಿರುವ ಅಧಿಕಾರಿಗಳನ್ನು ಮುಖ್ಯ ಜಾಗೃತ ಅಧಿಕಾರಿಗಳನ್ನಾಗಿ ನೇಮಿಸಿ ಆದೇಶಿಸಿದೆ.

| ಕ್ರಮ ಸಂಖ್ಯೆ | ಸಾರಿಗೆ ಸಂಸ್ಥೆಗಳು ಹಾಗೂ ವಿಳಾಸ | ಮುಖ್ಯ ಜಾಗೃತ ಅಧಿಕಾರಿಗಳು |
|---|---|---|
| 1 | ಕರ್ನಾಟಕ ರಸ್ತೆ ಸಾರಿಗೆ ನಿಗಮ, ಬೆಂಗಳೂರು. | ನಿರ್ದೇಶಕರು (ಭದ್ರತಾ ಮತ್ತು ಜಾಗೃತ) |
| 2 | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಬೆಂಗಳೂರು. | ನಿರ್ದೇಶಕರು (ಭದ್ರತಾ ಮತ್ತು ಜಾಗೃತ) |
| 3 | ವಾಯುವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಹುಬ್ಬಳ್ಳಿ. | ಮುಖ್ಯ ಭದ್ರತಾ ಮತ್ತು ಜಾಗೃತ ಅಧಿಕಾರಿ |
| 4 | ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ, ಕಲಬುರಗಿ. | ಮುಖ್ಯ ಭದ್ರತಾ ಮತ್ತು ಜಾಗೃತ ಅಧಿಕಾರಿ |

ಮುಖ್ಯ ಜಾಗೃತ ಅಧಿಕಾರಿಯ ಕರ್ತವ್ಯಗಳ ಪಟ್ಟಿಯನ್ನು ಪ್ರತ್ಯೇಕವಾಗಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯಿಂದ ಹೊರಡಿಸಲಾಗುವುದು.

**PR. 602**

**SC. 100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಬೀರೇಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಾರಿಗೆ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಸೋಮಶೇಖರಪ್ಪ, ಅಬಕಾರಿ ಜಂಟಿ ಆಯುಕ್ತರು, ರಾಜ್ಯ ವಿಚಕ್ಷಣಾದಳ, ಬೆಂಗಳೂರು ಇವರ ವಿರುದ್ಧ ಬೆಳಗಾವಿ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುವ ಮೊಕದ್ದಮೆ ಸಂ.18/2011ರ ಕುರಿತು ಅಭಿಯೋಜನಾ ಮಂಜೂರಾತಿ ನೀಡುವ ಕುರಿತು–

**ಓದಲಾಗಿದೆ :** ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಎಲ್–50/ಸಿಆರ್–18/2011, ದಿನಾಂಕ:29–02–2016 ಮತ್ತು 16–05–2016.

**ಪ್ರಸ್ತಾವನೆ:**

ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಇವರು ಮೇಲೆ ಓದಲಾದ ದಿನಾಂಕ:29–2–2016ರ ಪತ್ರದಲ್ಲಿ ಶ್ರೀ ಸೋಮಶೇಖರಪ್ಪ, ಅಬಕಾರಿ ಉಪ ಆಯುಕ್ತರಾಗಿ ಬೆಳಗಾವಿ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ನಡೆದ ದಾಳಿಯಲ್ಲಿ ಬಲ್ಲ ಮೂಲಗಳ ಆದಾಯಕ್ಕಿಂತಲೂ ಶೇ.279.83ರಷ್ಟು ಹೆಚ್ಚಿನ ಆಸ್ತಿ ಹೊಂದಿರುವುದು ಕಂಡು ಬಂದಿದ್ದು, ಬೆಳಗಾವಿ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ, 1988ರ ಕಲಂ 13(1)(ಇ) ಸಹವಾಚ ಕಲಂ 13(2)ರಡಿ ದಾಖಲಾದ ಪ್ರಕರಣ ಸಂ.18/2011ಕ್ಕೆ ಸಂಬಂಧಿಸಿದಂತೆ ಅವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಸರ್ಕಾರದ ಮಂಜೂರಾತಿ ಕೋರಿದ್ದಾರೆ, ಈ ಪ್ರಕರಣಕ್ಕೆ ಸಂಬಂಧಿಸಿದ ತನಿಖಾ ವರದಿಯನ್ನು ಅಪರ ಪೊಲೀಸ್ ಮಹಾ ನಿರ್ದೇಶಕರು ಮೇಲೆ ಓದಲಾದ ದಿನಾಂಕ: 16–5–2016ರ ಪತ್ರದೊಂದಿಗೆ ಕಳುಹಿಸಿದ್ದಾರೆ.

ಅಪರ ಪೊಲೀಸ್ ಮಹಾ ನಿರ್ದೇಶಕರ ಪತ್ರ ಮತ್ತು ಪ್ರಕರಣದ ತನಿಖಾ ವರದಿಯನ್ನು ಇತರೆ ದಾಖಲೆಗಳನ್ನು ಪರಿಶೀಲಿಸಿದೆ. ಶ್ರೀ ಸೋಮಶೇಖರಪ್ಪ, ಅಬಕಾರಿ ಉಪ ಆಯುಕ್ತರಾಗಿ ಬೆಳಗಾವಿ ಜಿಲ್ಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಅಕ್ರಮವಾಗಿ ಸಂಪಾದಿಸಿದ ಹಣವನ್ನು ಸರ್ಕಾರಿ ವಾಹನದಲ್ಲಿ ಸಾಗಿಸುತ್ತಿದ್ದಾರೆಂಬ ನಂಬಲರ್ಹ ಮೂಲಗಳಿಂದ ಮಾಹಿತಿ ಬಂದಿತ್ತು, ಆದಕಾರಣ, ಈ ಅಧಿಕಾರಿ ಬೆಳಗಾವಿಯಲ್ಲಿ ವಾಸವಿದ್ದ ಈಫಾ ಹೋಟೆಲ್ ಮೇಲೆ ದಿನಾಂಕ:25–6–2011ರಂದು ಲೋಕಾಯುಕ್ತ ದಾಳಿ ನಡೆಸಿದಾಗ ಈ ಅಧಿಕಾರಿಯ ವಾಹನ ಚಾಲಕರಿಂದ 9,98,697/– ನಗದು ವಶಪಡಿಸಿಕೊಂಡಿರುತ್ತಾರೆ. ಈ ನಗದು ಹಣ ಹೊಂದಿರುವ ಬಗ್ಗೆ ಶ್ರೀ ಸೋಮಶೇಖರಪ್ಪ, ಅಬಕಾರಿ ಉಪ ಆಯುಕ್ತರು ಮತ್ತು ವಾಹನ ಚಾಲಕ ಶ್ರೀ ರಾಯಪ್ಪ ಬಸಪ್ಪ ಮದ್ಲಿ ಇವರು ತೃಪ್ತಿಕರವಾದ ವಿವರಣೆಯನ್ನು ನೀಡದೇ ಇದ್ದುದರಿಂದ, ಬೆಳಗಾವಿ ಲೋಕಾಯುಕ್ತ ಠಾಣೆಯಲ್ಲಿ ಮೊಕದ್ದಮೆ ಸಂ.14/2011 ರಲ್ಲಿ ಭ್ರಷ್ಟಾಚಾರ ಪ್ರತಿಬಂಧಕ ಕಾಯ್ದೆ, 1988ರ ಕಲಂ 7, 13(1)(ಡಿ) ಸಹವಾಚ 13(2) ರಡಿ ಮೊಕದ್ದಮೆ ದಾಖಲಿಸಿ ತನಿಖೆ ಕೈಗೊಂಡಿದ್ದರು.

ಲೋಕಾಯುಕ್ತ ಪೊಲೀಸರು ತನಿಖೆ ಮುಂದುವರೆಸಿದಾಗ ಈ ಅಧಿಕಾರಿಯು ಬೆಂಗಳೂರಿನಲ್ಲಿರುವ ಮನೆಯಲ್ಲಿ ಅಕ್ರಮ ಸಂಪತ್ತನ್ನು ಸಂಗ್ರಹಿಸುತ್ತಾರೆಂಬ ಖಚಿತ ಮಾಹಿತಿ ಮೇರೆಗೆ ಈ ಮನೆಯನ್ನು ಶೋಧನೆ ಮಾಡುವುದು ಅವಶ್ಯವೆಂದು ಕಂಡುಬಂದಿದ್ದರಿಂದ ಕ್ರಿಮಿನಲ್ ಪ್ರೊಸೀಜರ್ ಕೋಡ್‌ನ ಕಲಂ 165 ರಡಿ ಬೆಂಗಳೂರುನಲ್ಲಿರುವ ಮನೆಯನ್ನು ದಿನಾಂಕ: 26–06–2011 ರಂದು, ಆರೋಪಿಯ ಅಬಕಾರಿ ಉಪ ಅಯುಕ್ತರು, ಬೆಳಗಾವಿ ಜಿಲ್ಲೆಯ ಕಛೇರಿಯ ಶೋಧನೆಯನ್ನು ದಿನಾಂಕ:26–06–2011 ರಂದು ಕೈಗೊಂಡಿರುತ್ತಾರೆ. ಆಪಾದಿತರ ಪತ್ನಿಯಾದ ಶ್ರೀಮತಿ ಅರುಣ ಇವರ ಸಮಕ್ಷಮ ಆಪಾದಿತರು ಬೆಂಗಳೂರಿನ ಬಿ.ಟಿ.ಎಂ. ಲೇಔಟ್‌ನಲ್ಲಿರುವ ಬ್ಯಾಂಕ್ ಆಫ್ ಬರೋಡದಲ್ಲಿ ಹೊಂದಿದ್ದ ಲಾಕರ್ ನಂ.18 ಅನ್ನು ದಿನಾಂಕ:04–07–2011 ರಂದು ಶೋಧನೆ ಮಾಡಿರುತ್ತಾರೆ. ಅಲ್ಲದೇ, ದಿನಾಂಕ:05–07–2011 ರಂದು ಬೆಂಗಳೂರಿನಲ್ಲಿ ಜಯನಗರ ಆರ್.ಟಿ.ಓ ಕಛೇರಿಗೆ ತೆರಳಿ ಆಪಾದಿತರು ಹೊಂದಿದ್ದ ವಾಹನಗಳ ಬಗ್ಗೆ ಮಾಹಿತಿಯನ್ನು, ಬಿ.ಬಿ.ಎಂ.ಪಿ.ಗೆ ತೆರಳಿ ಆಪಾದಿತರು ಹೊಂದಿದ್ದ ಮನೆಯ ಬಗ್ಗೆ ಮಾಹಿತಿ ಮತ್ತು ವಿವಿಧ ಬ್ಯಾಂಕ್‌ಗೆ ತೆರಳಿ ಆಪಾದಿತರು ಹೊಂದಿದ್ದ ಇತರೆ ಖಾತೆಗಳ ಬಗ್ಗೆ ಮಾಹಿತಿಯನ್ನು ಪಡೆದಿರುತ್ತಾರೆ. ಅಪಾರ ಪ್ರಮಾಣದಲ್ಲಿ ಅಕ್ರಮ ಆಸ್ತಿಯನ್ನು ಸಂಗ್ರಹಿಸಿರುವುದು ಕಂಡುಬಂದಿದ್ದರಿಂದ ಇವರ ವಿರುದ್ಧ ಬೆಳಗಾವಿ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಭ್ರಷ್ಟಚಾರ ಪ್ರತಿಬಂಧಕ ಕಾಯ್ದೆ, 1988ರ ಕಲಂ 13(1)(ಇ) ಸಹವಾಚ 13(2) ರಡಿ ದಿನಾಂಕ:21–07–2011 ರಂದು ಅಪರಾಧ ಸಂಖ್ಯೆ 18/2011 ಅನ್ನು ದಾಖಲಿಸಿಕೊಂಡರು.

ಈ ಪ್ರಕರಣದ ಶೋಧನಾ ಮಹಜರ್‌ಗಳ ಮತ್ತು ವಿವರವಾದ ತನಿಖೆ ನಡೆಸಿದ ಪ್ರಕಾರ ಆಪಾದಿತರ ಚರ ಮತ್ತು ಸ್ಥಿರಾಸ್ತಿ ಅಂದರೆ ಗೃಹೋಪಯೋಗಿ ಉಪಕರಣಗಳು, ಚಿನ್ನ ಮತ್ತು ಬೆಳ್ಳಿ, ಬ್ಯಾಂಕ್ ಡಿಪಾಸಿಟ್‌ಗಳು, ವಾಹನಗಳು, ನಿವೇಶನಗಳು ಇವುಗಳನ್ನೊಳಗೊಂಡಂತೆ ಆಸ್ತಿಗಳು ಮತ್ತು ಇವುಗಳಿಗೆ ಸಂಬಂಧಿಸಿದ ದಾಖಲೆಗಳು ಪತ್ತೆಯಾಗಿರುತ್ತವೆ. ಇವರ ಸ್ಥಿರ/ಚರ ಆಸ್ತಿ ವಿವರಗಳು, ಖರ್ಚು ಮತ್ತು ಅಸಮತೋಲನ ಆಸ್ತಿಮೌಲ್ಯ ಕೆಳಗಿನಂತಿದೆ;

ಆಸ್ತಿ

| ಅ.ನಂ. | ಆಸ್ತಿ ವಿವರ | ಮೌಲ್ಯ ರೂಪಾಯಿ |
|---|---|---|
| | ಚೆಕ್ ಅವಧಿಯಲ್ಲಿ ಸಂಪಾದಿಸಿದ ಆಸ್ತಿಗಳ ವಿವರ | |
| 1. | ಹರಿಹರ ತಾಲ್ಲೂಕು, ಕಸಬಾ ಹೋಬಳಿ;<br>1) ಸಾಲಕಟ್ಟೆ ಗ್ರಾಮದ ಸರ್ಕಾರಿ ರಿ.ಸ.ನಂ.19–2ಪಿ2 ಕ್ಷೇತ್ರ 08 ಗುಂಟೆ,<br>2) ಸಾಲಕಟ್ಟೆ ಗ್ರಾಮದ ಸರ್ಕಾರಿ ರಿ.ಸ.ನಂ.21–ಪಿ1 ಕ್ಷೇತ್ರ 1 ಎಕರೆ 20 ಗುಂಟೆ,<br>3) ಸಾಲಕಟ್ಟೆ ಗ್ರಾಮ ರಿ.ಸ.ನಂ.23–2ಎಪಿ2 ಕ್ಷೇತ್ರ 1 ಎಕರೆ 17 ಗುಂಟೆ,<br>4) ಸಾಲಕಟ್ಟೆ ಗ್ರಾಮ ರಿ.ಸ.ನಂ.13–2 ಕ್ಷೇತ್ರ 5 ಎಕರೆ 12 ಗುಂಟೆ,<br>5) ಸಾಲಕಟ್ಟೆ ಗ್ರಾಮದ ರಿ.ಸ.ನಂ.20–1 ಕ್ಷೇತ್ರ 1 ಎಕರೆ 36 ಗುಂಟೆ,<br>ಹೀಗೆ ಒಟ್ಟು ಐದು ಜಮೀನುಗಳು | 1136000 |
| 2 | ಹರಿಹರ ತಾಲ್ಲೂಕು, ಕಸಬಾ ಹೋಬಳಿ ಸಾಲಕಟ್ಟೆ ಗ್ರಾಮ ರಿ.ಸ.ನಂ.23–2ಎಪಿ2 ಕ್ಷೇತ್ರ 1 ಎಕರೆ 17 ಗುಂಟೆ ಜಮೀನಿನಲ್ಲಿ ಒಂದು ಅಂತಸ್ಥಿನ ಮನೆ ನಿರ್ಮಿಸಿರುತ್ತಾರೆ. | 2330000 |
| 3 | ನಿವೇಶನ ಸಂ. #65, ಬಿ.ಟಿ.ಎಂ. ಲೇಔಟ್, ಕೆ.ಎ.ಎಸ್ ಆಫೀಸರ್ಸ್ ಲೇಔಟ್, ಬೆಂಗಳೂರು ಕ್ಷೇತ್ರ : 2400 ಚ.ಅಡಿ | 485000 |
| 4 | ನಿವೇಶನ ಸಂ. #65, ಬಿ.ಟಿ.ಎಂ. ಲೇಔಟ್, ಕೆ.ಎ.ಎಸ್ ಆಫೀಸರ್ಸ್ ಲೇಔಟ್, ಬೆಂಗಳೂರು ನೇದ್ದರಲ್ಲಿ ಎರಡು ಅಂತಸ್ಥಿನ ಭವ್ಯವಾದ ಮನೆ | 3480000 |
| 5 | ಸೈಟ್ ನಂ.655, ಡೋರ್ ನಂ.813/1.2, ಖಾತೆ ಸಂ.2513&2514 ಕ್ಷೇತ್ರ 1200 ಚ.ಅಡಿ ಖಾಲಿ ಜಾಗ ಮತ್ತು ಸದರಿ ಜಾಗದಲ್ಲಿ ಕಟ್ಟಿರುವ ಹಳೆ ಕಾಲದ ವಾಸದ ಮನೆ ಸಹಿತವಾದ ಸ್ವತ್ತು, 1ನೇ ಮೇನ್, 11ನೇ ಕ್ರಾಸ್, ಕೆ.ಟಿ.ಜೆ ನಗರ, ದಾವಣಗೆರೆ ಸಿಟಿ | 0 |
| 6 | ನಿವೇಶನ ಸಂ.229, ಅರಳಿಮರದ ಪಾಳ್ಯ ಬಡಾವಣೆ, ತುಮಕೂರು ಕ್ಷೇತ್ರ : 2400 ಚ.ಅಡಿ | 52000 |
| 7 | ಆಪಾದಿತರು ಸಂಪಾದಿಸಿರುವ ಚರಾಸ್ತಿಗಳು | 0 |
| | ಗೃಹ ಉಪಯೋಗಿ ವಸ್ತುಗಳು | 269500 |
| | ಪೀಠೋಪಕರಣಗಳು | 234400 |
| | ವಿದ್ಯುತ್ತ ಹಾಗೂ ವಿದ್ಯುನ್ಮಾನ ಉಪಕರಣಗಳು | 512800 |
| | ಬಂಗಾರದ ಆಭರಣಗಳು | 0 |
| | ಬೆಳ್ಳಿಯ ಆಭರಣಗಳು | 6000 |
| | ನಗದು ಹಣ | 3340 |
| 8 | ಮೋಟಾರು ವಾಹನ ಖರೀದಿಸಿದ ಮಾಹಿತಿ | |
| | ಎ) ಹೊಂಡಾ ಎಕ್ಟಿವಾ ಮೋಟಾರ ಸೈಕಲ್ ಕೆಎ 01 ಇಡಿ 1721 | 38430 |
| 9 | ವಿವಿಧ ಬ್ಯಾಂಕ್‌ಗಳಲ್ಲಿ ಹೊಂದಿದ ಉಳಿತಾಯ ಖಾತೆಗಳ ವಿವರ | 237638 |
| 10 | ವಿವಿಧ ಬ್ಯಾಂಕ್‌ಗಳಲ್ಲಿ ಹೊಂದಿದ ಠೇವಣಿ ಖಾತೆಗಳ ವಿವರ | 920000 |
| 11 | ಎನ್.ಎಸ್.ಸಿ ಠೇವಣಿ ವಿವರ | 10000 |
| 12 | ನೀರಿನ ಸಂಪರ್ಕ ಪಡೆಯುವ ಕಾಲಕ್ಕೆ ಸಂದಾಯ ಮಾಡಿದ ಠೇವಣಿ | 1125 |
| 13 | ವಿದ್ಯುತ್ ಸಂಪರ್ಕ ಪಡೆಯುವ ಕಾಲಕ್ಕೆ ಸಂದಾಯ ಮಾಡಿದ ಠೇವಣಿ | 27520 |
| | **ಒಟ್ಟು ರೂ.** | **9743753** |

ಆದಾಯ

| ಅ.ನಂ. | ಆದಾಯ ವಿವರ | ಮೌಲ್ಯ ರೂಪಾಯಿ |
|---|---|---|
| 1 | ವೇತನ ಆದಾಯ: (ದಿನಾಂಕ: 23.03.1997 ರಿಂದ ದಿನಾಂಕ: 21.07.2011) | 2313285 |
| 2 | ಕಟ್ಟಡಗಳ ಬಾಡಿಗೆಯಿಂದ ಬಂದ ಆದಾಯ: | 0 |
| | ಎ) ನಿವೇಶನ ಸಂ.229, ಅರಳಿಮರದ ಪಾಳ್ಯ ಬಡಾವಣೆ, ತುಮಕೂರ, ಕ್ಷೇತ್ರ : 2400 ಚ.ಅಡಿ | 0 |
| | ಬಿ) ಸೈಟ್ ನಂ.655, ಡೋರ್ ನಂ.813/1–2, 1ನೇ ಮೇನ್, 11ನೇ ಕ್ರಾಸ್, ಕೆ.ಟಿ.ಜೆ ನಗರ, ದಾವಣಗೆರೆ | 0 |

| | | |
|---|---|---|
| | ಸಿಟಿ ದಿಂದ ಪಡೆದ ಬಾಡಿಗೆ ಆದಾಯ | |
| 3 | ಕೃಷಿಯಿಂದ ಬಂದ ಆದಾಯ | |
| | ಎ) ಹರಿಹರ ತಾಲ್ಲೂಕು, ಕಸಬಾ ಹೋಬಳಿ | 656266 |
| | 1) ಸಾಲಕಟ್ಟೆ ಗ್ರಾಮದ ಸರ್ಕಾರಿ ರಿ.ಸ.ನಂ.19–2ಪಿ2 ಕ್ಷೇತ್ರ 08 ಗುಂಟೆ,<br>2) ಸಾಲಕಟ್ಟೆ ಗ್ರಾಮದ ಸರ್ಕಾರಿ ರಿ.ಸ.ನಂ.21–ಪಿ1 ಕ್ಷೇತ್ರ 1 ಎಕರೆ 20 ಗುಂಟೆ,<br>3) ಸಾಲಕಟ್ಟೆ ಗಾಮ್ರ ರಿ.ಸ.ನಂ.23–2ಎಪಿ2 ಕ್ಷೇತ್ರ 1 ಎಕರೆ 17 ಗುಂಟೆ,<br>4) ಸಾಲಕಟ್ಟೆ ಗ್ರಾಮ ರಿ.ಸ.ನಂ.13–2 ಕ್ಷೇತ್ರ 5 ಎಕರೆ 12 ಗುಂಟೆ ಮತ್ತು<br>5) ಸಾಲಕಟ್ಟೆ ಗ್ರಾಮ ರಿ.ಸ.ನಂ.20–1 ಕ್ಷೇತ್ರ 1 ಎಕರೆ 36 ಗುಂಟೆ ಹೀಗೆ ಒಟ್ಟು ಐದು ಜಮೀನುಗಳಿಂದ ಬಂದ ಆದಾಯ | |
| | ಬಿ) ಹರಿಹರ ತಾಲ್ಲೂಕು, ಕಸಬಾ ಹೋಬಳಿ<br>1) ಸಾಲಕಟ್ಟೆ ಗ್ರಾಮ ಸರ್ಕಾರಿ ರಿ.ಸ.ನಂ.21–ಪಿ1 ಕ್ಷೇತ್ರ 1 ಎಕರೆ 20 ಗುಂಟೆ ಮತ್ತು<br>2) ಸಾಲಕಟ್ಟೆ ಗ್ರಾಮ ರಿ.ಸ.ನಂ.13–2 ಕ್ಷೇತ್ರ 5 ಎಕರೆ 12 ಗುಂಟೆ ಜಮೀನುಗಳಲ್ಲಿ ಬೆಳೆದ ತೆಂಗಿನ ಮರದಿಂದ ಬಂದ ಆದಾಯ | 23088 |
| 4 | ಶ್ರೀಮತಿ ಅರುಣಾ ಕೋಂ. ಸೋಮಶೇಖರಪ್ಪ ರವರ ಆದಾಯ | 0 |
| 5 | ಕು. ಅಭಿಷೇಕ ಎ.ಎಸ್ ರವರ ಆದಾಯ | 0 |
| 6 | ಬ್ಯಾಂಕಿನಿಂದ ಪಡೆದ ಸಾಲದ ಆದಾಯ | 0 |
| | ಎ) ಪಂಜಾಬ್ ನ್ಯಾಷನಲ್ ಬ್ಯಾಂಕ್, ಚಿಕ್ಕಪೇಟೆ ಶಾಖೆ, ಬೆಂಗಳೂರು–53 | 1000000 |
| 7 | ಖಾಸಗಿ ವ್ಯಕ್ತಿಗಳಿಂದ ಪಡೆದ ಸಾಲದ ಆದಾಯ | 0 |
| 8 | ವಾಹನ ಮಾರಾಟದಿಂದ ಬಂದ ಹಣ | 0 |
| | ಅ) ಟಾಟಾ ಸ್ಕಾರ್ಪಿಯೋ ವಾಹನ ಸಂ.ಕೆ.ಎ.05 ಎಂಡಿ 8485 | 250000 |
| 9 | ಸಾಮಾನ್ಯ ಭವಿಷ್ಯ ನಿಧಿ ಖಾತೆ ಸಂ.ಇಎಕ್ಸ್‌ಇ–3486 ನೇದ್ದರಲ್ಲಿಂದ ಭಾಗಶಃ ಹಣ ಹಿಂಪಡೆದಿದ್ದರಿಂದ ಬಂದ ಹಣ | 500000 |
| 10 | ಆಪಾದಿತರು ಪಕ್ವವಾದ ಜೀವ ವಿಮೆಯಿಂದ ಪಡೆದ ಆದಾಯ | 40000 |
| | ಒಟ್ಟು ರೂ. | **47,82,639** |

**ಖರ್ಚು**

| ಅ.ನಂ. | ಖರ್ಚಿನ ವಿವರ | ಮೌಲ್ಯ ರೂಪಾಯಿ |
|---|---|---|
| 1 | ಕೌಟುಂಬಿಕ ನಿರ್ವಹಣಾ ವೆಚ್ಚ | 970511 |
| 2 | ಮಕ್ಕಳ ವಿದ್ಯಾಭ್ಯಾಸದ ಖರ್ಚು | 143822 |
| 3 | ಜೀವ ವಿಮೆ ಪಾಲಿಸಿಗಳು | 3252440 |
| 4 | ವಿದ್ಯುತ್ ಸಂಪರ್ಕ ಪಡೆಯಲು ನೀಡಿದ ವಿದ್ಯುತ್ ಬಳಕೆಗೆ ಪಾವತಿಸಿದ ಹಣದ ವಿವರ | 262216 |
| 5 | ಮನೆ ಕರ ಪಾವತಿಸಿದ ಖರ್ಚು | 56555 |
| 6 | ಮನೆ ಕಟ್ಟಲು ಅನುಮತಿಗಾಗಿ ಕಟ್ಟಿರುವ ಶುಲ್ಕ | 7526 |
| 7 | ನೀರಿನ ಕರ ಪಾವತಿಸಿದ ಖರ್ಚು | 21015 |
| 8 | ಕೊಳವೆ ಜೋಡಿಸಲು ರಸ್ತೆ ಅಗೆಯಲು ಅನುಮತಿಗಾಗಿ ಪಾವತಿಸಿದ ಶುಲ್ಕ | 6022 |
| 9 | ವಾಹನಗಳ ತೆರಿಗೆ, ನೋಂದಣಿ, ಇತ್ಯಾದಿಗಾಗಿ ಮಾಡಿದ ಖರ್ಚು | 69174 |
| 10 | ಬ್ಯಾಂಕ್ ಸಾಲಕ್ಕೆ ನೀಡಿದ ಅಸಲು, ಬಡ್ಡಿ & ಸಾಲ ಪಡೆಯುವಾಗ ಬ್ಯಾಂಕಿಗೆ ಸಂದಾಯ ಮಾಡಿದ ಇತರೆ ಖರ್ಚಿನ ವಿವರ | 1198669 |
| 11 | ಬ್ಯಾಂಕ್ ಲಾಕರ್‌ಗೆ ನೀಡಿದ ಬಾಡಿಗೆ | 2024 |
| 12 | ಜಮೀನು, ನಿವೇಶನ ಇತ್ಯಾದಿಗಳನ್ನು ನೋಂದಣಿ ಮಾಡಲು ಪಾವತಿಸಿದ ಮುದ್ರಾಂಕ ಮತ್ತು ಇತರೆ ಖರ್ಚುಗಳು | 224391 |
| 13 | ಸೋಮಶೇಖರಪ್ಪ ಇವರು ಕ್ಲಬ್ ಸದಸ್ಯತ್ವ ಪಡೆದು ಸಂದಾಯ ಮಾಡಿದ ಶುಲ್ಕ | 257680 |

| | | |
|---|---|---|
| 14 | ಕು.ಅಭಿಷೇಕ ತಂದೆ: ಸೋಮಶೇಖರಪ್ಪ ಇವರು ಕ್ಲಬ್ ಸದಸ್ಯತ್ವ ಪಡೆದು ಸಂದಾಯ ಮಾಡಿದ ಶುಲ್ಕ | 12600 |
| 15 | ಹೊಟೇಲ್ ವಾಸ್ತವ್ಯ ಮಾಡಿ ಸಂದಾಯ ಮಾಡಿದ ಹಣ | 52500 |
| 16 | ಶ್ರೀಮತಿ ಅರುಣಾ ಕೋಂ. ಸೋಮಶೇಖರಪ್ಪ ಇವರು ಸಂದಾಯ ಮಾಡಿದ ಆದಾಯ ತೆರಿಗೆ | 441828 |
| 17 | ಕು. ಅಭಿಷೇಕ ತಂದೆ: ಸೋಮಶೇಖರಪ್ಪ ಇವರು ಸಂದಾಯ ಮಾಡಿದ ಆದಾಯ ತೆರಿಗೆ | 96075 |
| 18 | ಸಾಕು ನಾಯಿ ಖರೀದಿಗೆ ಮತ್ತು ಸಾಕು ನಾಯಿಗೆ ಮಾಡಿದ ಖರ್ಚು | 1136100 |
| 19 | ಟಾಟಾ ಸಫಾರಿ ವಾಹನ ಸಂ.ಕೆ.ಎ.05, ಎಂಡಿ–8485 ನೇದ್ದನ್ನು ಖರೀದಿಸುವಾಗ ವಿನಿಯೋಗಿಸಿದ ನಗದು | 197940 |
| 20 | ಶೇಯಾ ಆಪ್ಟಿಕಲ್ ರವರಿಗೆ ಸಂದಾಯ ಮಾಡಿದ ಶುಲ್ಕ | 13260 |
| | **ಒಟ್ಟು ರೂ.** | **84,22,348** |

ಮೇಲಿನ ತಃಖ್ತೆಯಿಂದ ಕಂಡು ಬಂದ ಅಸಮತೋಲನ ಆಸ್ತಿ ವಿವರಗಳು;

| ಕ್ರ. ಸಂ | ವಿವರಗಳು | ಮೌಲ್ಯ (₹.) |
|---|---|---|
| 1 | ಆಪಾಧಿತರು ತಮ್ಮ ಚೆಕ್ ಅವಧಿಯಲ್ಲಿ ಖರೀದಿಸಿದ ಆಸ್ತಿಗಳ ಒಟ್ಟು ಮೊತ್ತ | 97,43,753 |
| 2 | ಆಪಾಧಿತರು ತಮ್ಮ ಚೆಕ್ ಅವಧಿಯಲ್ಲಿ ಮಾಡಿರುವ ಖರ್ಚು ವೆಚ್ಚಗಳ ಒಟ್ಟು ಮೊತ್ತ | 84,22,348 |
| 3 | ಆಪಾಧಿತರು ತಮ್ಮ ಚೆಕ್ ಅವಧಿಯಲ್ಲಿ ಖರೀದಿಸಿದ ಆಸ್ತಿ ಮತ್ತು ಖರ್ಚು ವೆಚ್ಚಗಳ ಒಟ್ಟು ಮೊತ್ತ | 1,81,66,101 |
| 4 | ಆಪಾಧಿತರು ತಮ್ಮ ಚೆಕ್ ಅವಧಿಯಲ್ಲಿ ಹೊಂದಿದ ಆದಾಯದ ಒಟ್ಟು ಮೊತ್ತ | 47,82,639 |
| 5 | ಆಪಾಧಿತರು ತಮ್ಮ ಆದಾಯಕ್ಕಿಂತ ಹೆಚ್ಚಿಗೆ ಹೊಂದಿದ ಆಸ್ತಿ ಮತ್ತು ಖರ್ಚು ವೆಚ್ಚಗಳ ಮೊತ್ತ | 1,33.83,462 |
| 6 | ಆಪಾಧಿತ ಅಧಿಕಾರಿಯು ಶೇಕಡಾವಾರು ಹೊಂದಿದ ಹೆಚ್ಚಿನ ಆಸ್ತಿ ಮತ್ತು ಖರ್ಚು ವೆಚ್ಚ | 279.83% |

ಆರೋಪಿಯು ಮೊಕದ್ದಮೆ ಸಂಖ್ಯೆ:18/2011ನ್ನು ರದ್ದುಗೊಳಿಸುವಂತೆ ಧಾರವಾಡದ ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಅರ್ಜಿ ಸಂಖ್ಯೆ:10443/2013 ದಾಖಲಿಸಿದ್ದರು. ಈ ಅರ್ಜಿಯನ್ನು ಪರಿಶೀಲಿಸಿ ದಿನಾಂಕ:19–09–2014 ರಂದು ನೀಡಿದ ತೀರ್ಪಿನಲ್ಲಿ ಆರೋಪಿ ಸಲ್ಲಿಸಿದ್ದ ಅರ್ಜಿಯನ್ನು ವಜಾಗೊಳಿಸಿತು, ಈ ತೀರ್ಪಿನ ಹಿನ್ನೆಲೆಯಲ್ಲಿ ಪ್ರಕರಣದ ಸಂಖ್ಯೆ:18/2011 ರಲ್ಲಿ ತನಿಖೆಯನ್ನು ಪೂರೈಸಲು ತನಿಖಾಧಿಕಾರಿಯವರಿಗೆ ಯಾವುದೇ ಕಾನೂನು ತೊಡಕು ಇಲ್ಲವೆಂದು ಲೋಕಾಯುಕ್ತ ಸಂಸ್ಥೆಯ ಕಾನೂನು ಕೋಶವು ಅಭಿಪ್ರಾಯ ನೀಡಿರುವ ಅಂಶವನ್ನು ತನಿಖಾ ವರದಿಯ ಪುಟ:16ರಲ್ಲಿರುವುದನ್ನು ಪರಿಶೀಲಿಸಲಾಗಿದೆ. ಅಲ್ಲದೆ, ಪ್ರಕರಣ ಸಂಖ್ಯೆ 14/2011ಕ್ಕೆ ಸಂಬಂಧಿಸಿದಂತೆ ಜಪ್ತು ಮಾಡಲಾದ ₹.9,98,697/–ನ್ನು ಹಾಗೂ ಅದೇ ಪ್ರಕರಣಕ್ಕೆ ಸಂಬಂಧಿಸಿದಂತೆ ಈಫಾ ಹೋಟೆಲ್ ರೂಮ್ ನಂ.207ರ ಪಂಚನಾಮೆ ಕಾಲಕ್ಕೆ ನಮೂದಿಸಿದ ವಸ್ತುಗಳ ಬೆಲೆಗಳನ್ನು ಪ್ರಕರಣದ 18/2011 ತನಿಖೆಯಲ್ಲಿ ಪರಿಗಣಿಸಿರುವುದಿಲ್ಲವೆಂಬ ಅಂಶವನ್ನು ತನಿಖಾ ವರದಿಯ ಪುಟ 16 ರಲ್ಲಿರುವುದನ್ನು ಸಹ ಪರಿಶೀಲಿಸಲಾಗಿದೆ.

ಈ ಅಧಿಕಾರಿಯು ತನ್ನ ಸೇವಾ ಅವಧಿಯಲ್ಲಿ ಒಟ್ಟು ₹.97,43,753 ಮೌಲ್ಯದ ಆಸ್ತಿಯನ್ನು ಹೊಂದಿರುತ್ತಾರೆಂದು ಮತ್ತು ಈ ಅವಧಿಯಲ್ಲಿ ಆಪಾದಿತರು ತಮ್ಮ ಮತ್ತು ತಮ್ಮ ಕುಟುಂಬದ ಸದಸ್ಯರಿಗಾಗಿ ಮಾಡಿರುವ ಒಟ್ಟು ಖರ್ಚು ₹.84,22,348 ಗಳಾಗಿದ್ದು, ಒಟ್ಟು ಆಸ್ತಿ ಮತ್ತು ಖರ್ಚುಗಳ ಮೊತ್ತ ₹.1,81,66,101 ಆಗಿದೆ. ಆಪಾದಿತರ ಅಂದಾಜು ಆದಾಯದ ಒಟ್ಟು ಮೊತ್ತ ₹.47,82,639 ಗಳಾಗಿದ್ದು, ಹೆಚ್ಚಿನ ಪ್ರಮಾಣದ ಆಸ್ತಿಯ ಮೊತ್ತವು ₹.1,33,83,462 ಗಳಾಗಿದೆ. ಅಂದರೆ, ಆಪಾದಿತ ಶೇ. 279.83% ರಷ್ಟು ತಮ್ಮ ಬಲ್ಲ ಮೂಲಗಳಿಗಿಂತಲೂ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಕಂಡು ಬಂದಿರುತ್ತದೆ. ಇದಕ್ಕೆ ಆಪಾದಿತರ ಬಳಿ ಯಾವುದೇ ಸಮಾಧಾನಕರ ವಿವರಣೆ ಅಥವಾ ಲೆಕ್ಕ ಲಭ್ಯವಿಲ್ಲದಿರುವುದು ಕಂಡು ಬಂದಿದೆ. ಆಪಾದಿತರು ಭ್ರಷ್ಟಚಾರ ನಿರ್ಮೂಲನಾ ಕಾಯಿದೆ. 1988 ಕಲಂ 13(1)(ಇ) ಸಹವಾಚ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿದೆ. ಈ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂ: ಎಫ್‌ಡಿ 86 ಇಪಿಎಸ್ 2011, ಬೆಂಗಳೂರು, ದಿನಾಂಕ: 26–8–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಆರೋಪದ ಕುರಿತು ಭ್ರಷ್ಟಚಾರ ನಿರ್ಮೂಲನಾ ಕಾಯಿದೆ, 1988ರ ಕಲಂ 19(1)(ಬಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸೋಮಶೇಖರಪ್ಪ, ಅಬಕಾರಿ ಜಂಟಿ ಆಯುಕ್ತರು, ರಾಜ್ಯ ವಿಚಕ್ಷಣಾ ದಳ, ಬೆಂಗಳೂರು, ಇವರ ವಿರುದ್ಧ ಬೆಳಗಾವಿ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಅದೇ ಕಾಯ್ದೆಯ ಕಲಂ 13(1)(ಇ) ಸಹವಾಚ ಕಲಂ 13(2)ರಡಿ ದಾಖಲಾದ ಪ್ರಕರಣಕ್ಕೆ ಸಂಬಂಧಿಸಿದಂತೆ ಸಕ್ಷಮ ನ್ಯಾಯಾಲಯದ ಮುಂದೆ ಅಭಿಯೋಗಗೊಳಿಸಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಈ ಮೂಲಕ ಮಂಜೂರಾತಿ ನೀಡಿದೆ.

ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 19(1)ರನ್ವಯ ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮೊಹರಿನ ಅಡಿಯಲ್ಲಿ ದಿನಾಂಕ: 26–08–2016ರಂದು ಹೊರಡಿಸಲಾಗಿದೆ.

**PR. 603**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವೆಂಕಟೇಶ್.ಜಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ.(ಅಬಕಾರಿ)

## ಸಹಕಾರ ಸಚಿವಾಲಯ

**ವಿಷಯ :** 2016–17 ನೇ ಸಾಲಿನಲ್ಲಿ ರಾಜ್ಯದ ಸ್ವಸಹಾಯ ಗುಂಪುಗಳಿಗೆ ಪತ್ತಿನ ಸಹಕಾರಿ ಸಂಸ್ಥೆಗಳ ಮೂಲಕ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ:ಸಇ 115 ರರವಿ 2016, ದಿನಾಂಕ:26.04.2016.
2. ಸರ್ಕಾರದ ಆದೇಶ ಸಂಖ್ಯೆ:ಸಿಒ 354 ಸಿಎಲ್ಎಸ್ 2015, ದಿನಾಂಕ:20.04.2016.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್‌ಸಿಎಸ್/ಸಿಆರ್‌ಡಿ/ಕೆಎಂಈ–8/1/2015–16, ದಿನಾಂಕ:7.02.2016.
4. ದಿನಾಂಕ:17.03.2016 ರಂದು ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಸ್ವಸಹಾಯ ಗುಂಪುಗಳಿಗೆ ಶೇಕಡಾ 4ರ ಬಡ್ಡಿ ದರದಲ್ಲಿ ಸಹಕಾರಿ ಸಂಸ್ಥೆಗಳ ಮೂಲಕ ಸಾಲಗಳನ್ನು ನೀಡುವ ಯೋಜನೆ 2007–08ರಿಂದ ಸಹಕಾರ ಇಲಾಖೆಯಲ್ಲಿ ಜಾರಿಯಲ್ಲಿರುತ್ತದೆ.

ಮೇಲೆ ಓದಲಾದ (1)ರ ಪತ್ರದಲ್ಲಿ 2016–17ನೇ ಸಾಲಿನ ಆಯವ್ಯಯದಲ್ಲಿ ಅವಕಾಶ ಕಲ್ಪಿಸಿರುವಂತೆ ರಾಜ್ಯದ ಸ್ವಸಹಾಯ ಗುಂಪುಗಳಿಗೆ ಪತ್ತಿನ ಸಹಕಾರಿ ಸಂಸ್ಥೆಗಳ ಮೂಲಕ ಶೇ.4ರ ಬಡ್ಡಿ ದರದಲ್ಲಿ ಸಾಲ ನೀಡುವ ಯೋಜನೆಯನ್ನು 2016–17ನೇ ಸಾಲಿಗೆ ಮುಂದುವರೆಸಿ ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (2)ರ ಆದೇಶದಲ್ಲಿ ಈ ಯೋಜನೆಯನ್ನು 2015–16ನೇ ಸಾಲಿನಲ್ಲಿ ಮುಂದುವರಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ ಓದಲಾದ (3)ರ ನಿಬಂಧಕರ ಪತ್ರದಲ್ಲಿ 2016–17ನೇ ಸಾಲಿಗೆ ಸದರಿ ಯೋಜನೆಯಲ್ಲಿ ಕೇಂದ್ರ ಸರ್ಕಾರದ NRLM/NULM ಯೋಜನೆಗಳನ್ನು ಅಳವಡಿಸಿಕೊಂಡು ಅದರಂತೆ ಷರತ್ತುಗಳನ್ನು ಸೇರಿಸಿ ಆದೇಶ ಹೊರಡಿಸಲು ಸಹಕಾರ ಸಂಘಗಳ ನಿಬಂಧಕರು ಕೋರಿರುತ್ತಾರೆ.

ಮೇಲೆ ಓದಲಾದ (4)ರಲ್ಲಿನ ದಿನಾಂಕ:17.03.2016ರಂದು ನಡೆದ ಸಭೆಯ ನಡವಳಿಗಳಲ್ಲಿ ಈ ಯೋಜನೆಯಲ್ಲಿ ಕೆಲವು ಷರತ್ತುಗಳನ್ನು ಅಳವಡಿಸಲು ನಿರ್ಣಯಿಸಲಾಗಿರುತ್ತದೆ. ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಎಫ್‌ಡಿ 96 ವೆಚ್ಚ–2/2016, ದಿನಾಂಕ: 24.05.2016ರಲ್ಲಿ ಷರತ್ತಿಗೊಳಪಟ್ಟು ಯೋಜನೆಯನ್ನು ಅನುಷ್ಠಾನಗೊಳಿಸಲು ಸಹಮತಿಯನ್ನು ನೀಡಿರುತ್ತದೆ.

ನಿಬಂಧಕರ ಪ್ರಸ್ತಾವೆಯಂತೆ ಕೂಲಂಕಷವಾಗಿ ಪರಿಶೀಲಿಸಿ, ಯೋಜನೆಯನ್ನು 2016–17ನೇ ಸಾಲಿನಲ್ಲಿ ಕಾರ್ಯಗತಗೊಳಿಸಲು ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 354 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ: 24–8–2016.**

ಮೇಲೆ ವಿವರಿಸಲಾದ ಪರಿಸ್ಥಿತಿಯಲ್ಲಿ ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ರಾಜ್ಯದ ಸ್ವಸಹಾಯ ಗುಂಪುಗಳಿಗೆ ಶೇಕಡಾ 4ರ ಬಡ್ಡಿ ದರದಲ್ಲಿ ಅನ್ವಯಿಸುವ ಸಾಲಗಳನ್ನು ಒದಗಿಸಲು ಅನುಕೂಲವಾಗುವಂತೆ ಕೆಳಕಂಡ ಷರತ್ತಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ.

**ಷರತ್ತುಗಳು:–**

1. ಈ ಯೋಜನೆಯು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಡಿಸಿಸಿ ಬ್ಯಾಂಕಿನ ಶಾಖೆಗಳ ಮೂಲಕ ಸ್ವಸಹಾಯ ಗುಂಪುಗಳಿಗೆ ದಿನಾಂಕ:01.04.2016 ರಿಂದ 31.03.2017 ರವರೆಗೆ ವಿತರಿಸುವ ಸಾಲಗಳಿಗೆ ಮಾತ್ರ ಅನ್ವಯವಾಗುತ್ತದೆ.
2. ಕೇಂದ್ರ ಸರ್ಕಾರದ ಯೋಜನೆಯನ್ನು ರಾಜ್ಯ ಸರ್ಕಾರದ ಯೋಜನೆಗೆ ಅಳವಡಿಸಿಕೊಳ್ಳುವ ಸಲುವಾಗಿ ಕೇಂದ್ರ ಸರ್ಕಾರದ ರಾಷ್ಟ್ರೀಯ ರೂರಲ್ ಲೈವ್‌ಲಿಹುಡ್ ಮಿಷನ್ (NRLM) ಮತ್ತು ರಾಷ್ಟ್ರೀಯ ಅರ್ಬನ್ ಲೈವ್‌ಲಿಹುಡ್ ಮಿಷನ್(NULM) ಯೋಜನೆಯಲ್ಲಿ ಒಳಪಡುವ ಸ್ವಸಹಾಯ ಗುಂಪುಗಳಿಗೆ ಕೇಂದ್ರ ಸರ್ಕಾರ ನಿಗದಿಪಡಿಸಿದ ಷರತ್ತುಗಳನ್ವಯ ಸಾಲ ವಿತರಿಸತಕ್ಕದ್ದು.
3. ಕೇಂದ್ರ ಸರ್ಕಾರದ ರಾಷ್ಟ್ರೀಯ ರೂರಲ್ ಲೈವ್‌ಲಿಹುಡ್ ಮಿಷನ್ ಮತ್ತು ರಾಷ್ಟ್ರೀಯ ಅರ್ಬನ್ ಲೈವ್‌ಲಿಹುಡ್ ಮಿಷನ್ ಯೋಜನೆಗೆ ಒಳಪಡದೇ ಇರುವ ಸ್ವಸಹಾಯ ಗುಂಪುಗಳ ಪೈಕಿ ಶೇ.70ಕ್ಕಿಂತ ಹೆಚ್ಚಿನ ಬಿಪಿಎಲ್ ಸದಸ್ಯರನ್ನು ಹೊಂದಿರುವ ಸ್ವಸಹಾಯ ಗುಂಪುಗಳಿಗೆ ಪ್ಯಾಕ್ಸ್ ಹಾಗೂ ಡಿಸಿಸಿ ಬ್ಯಾಂಕುಗಳು ಗರಿಷ್ಠ ರೂ.3.00ಲಕ್ಷದವರೆಗೆ ಸಾಲಗಳಿಗೆ ಗರಿಷ್ಠ ಶೇ.12.00 ಬಡ್ಡಿ ದರ ಆಕರಣೆ ಮಾಡಿ ಸಾಲ ಮಿತರಿಸತಕ್ಕದ್ದು.
4. ರಾಜ್ಯ ಸರ್ಕಾರದ ನೀತಿಯನ್ವಯ ಸ್ವಸಹಾಯ ಗುಂಪುಗಳಿಗೆ ನಿವ್ವಳ ಶೇ.4 ಬಡ್ಡಿ ದರ ಅನ್ವಯವಾಗಲಿದ್ದು, ಸ್ವಸಹಾಯ ಗುಂಪುಗಳು ಪಾವತಿಸಬೇಕಾದ ಶೇ.12.00 ಬಡ್ಡಿ ದರದಲ್ಲಿ, ಕೇಂದ್ರ ಸರ್ಕಾರ ನೀಡುವ ಸಹಾಯಧನವನ್ನು ಹೊರತುಪಡಿಸಿ ಉಳಿದ ಹೆಚ್ಚುವರಿ ಬಡ್ಡಿ ದರವನ್ನು ಮಾತ್ರ ರಾಜ್ಯ ಸರ್ಕಾರದಿಂದ ಕ್ಲೇಮು ಮಾಡತಕ್ಕದ್ದು.
5. ಸ್ವಸಹಾಯ ಗುಂಪುಗಳು ತಮ್ಮ ಸದಸ್ಯರಿಗೆ ಗರಿಷ್ಠ ಶೇ.12ಕ್ಕಿಂತ ಕಡಿಮೆ ದರದಲ್ಲಿ ಮಾತ್ರ ಸಾಲ ವಿತರಿಸತಕ್ಕದ್ದು.
6. ಡಿಸಿಸಿ ಬ್ಯಾಂಕುಗಳು ಮತ್ತು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಸ್ವಸಹಾಯ ಗುಂಪುಗಳಿಗೆ ವಿತರಿಸುವ ಸಾಲಗಳಿಗೆ ಶೇ.4ರ ಬಡ್ಡಿ ಅನ್ವಯವಾಗುತ್ತದೆ.
7. ಕೇಂದ್ರ ಸರ್ಕಾರದ ರಾಷ್ಟ್ರೀಯ ರೂರಲ್ ಲೈವ್‌ಲಿಹುಡ್ ಮಿಷನ್ ಮತ್ತು ರಾಷ್ಟ್ರೀಯ ಅರ್ಬನ್ ಲೈವ್‌ಲಿಹುಡ್ ಮಿಷನ್ ಯೋಜನೆಯಲ್ಲಿ ಒಳಪಡುವ ಸ್ವಸಹಾಯ ಗುಂಪುಗಳಿಗೆ ಕೇಂದ್ರ ಸರ್ಕಾರದಿಂದ ಬಡ್ಡಿ ಸಹಾಯಧನವನ್ನು ಕ್ಲೇಮು ಮಾಡತಕ್ಕದ್ದು. ಸ್ವಸಹಾಯ ಗುಂಪುಗಳಿಗೆ ಶೇ.4ರ ಬಡ್ಡಿ ದರದಲ್ಲಿ ಸಾಲ ಅನ್ವಯವಾಗಬೇಕಿರುವುದರಿಂದ ಸಹಕಾರ ಸಂಸ್ಥೆಗಳಿಗೆ ಕೊರತೆ ಬೀಳುವ ಬಡ್ಡಿಯನ್ನು ರಾಜ್ಯ ಸರ್ಕಾರದಿಂದ ಭರಿಸಲಾಗುವುದು.

8. ಕೇಂದ್ರ ಸರ್ಕಾರದ ರಾಷ್ಟ್ರೀಯ ರೂರಲ್ ಲೈವ್‌ಲಿಹುಡ್ ಮಿಷನ್ ಮತ್ತು ರಾಷ್ಟ್ರೀಯ ಅರ್ಬನ್ ಲೈನ್‌ಲಿಹುಡ್ ಮಿಷನ್ ಯೋಜನೆಯಲ್ಲಿ ಒಳಪಡದೇ ಇರುವ ಸ್ವಸಹಾಯ ಗುಂಪುಗಳಿಗೆ ಶೇ.4ರ ಬಡ್ಡಿ ದರದಲ್ಲಿ ಸಾಲ ಅನ್ವಯವಾಗಬೇಕಿರುವುದರಿಂದ ವ್ಯತ್ಯಾಸದ ಬಡ್ಡಿ ಸಹಾಯಧನ ಶೇ.8ರ ದರದಲ್ಲಿ ರಾಜ್ಯ ಸರ್ಕಾರದಿಂದ ಕ್ಲೇಮು ಮಾಡತಕ್ಕದ್ದು. ಬಡ್ಡಿ ಸಹಾಯಧನದ ಕ್ಲೇಮು ಬಿಲ್ಲುಗಳ ನಮೂನೆಗಳನ್ನು ನಿಬಂಧಕರ ಹಂತದಲ್ಲಿ ಸಿದ್ದಪಡಿಸಿ. ಸಂಬಂಧಿಸಿದ ಸಹಕಾರ ಸಂಸ್ಥೆಗಳು/ಬ್ಯಾಂಕುಗಳು ಕಳುಹಿಸುವ ವ್ಯವಸ್ಥೆ ಮಾಡಿ, ಯೋಜನೆ ಅನುಷ್ಠಾನಗೊಳಿಸಲು ಎಲ್ಲಾ ಅಗತ್ಯ ಕ್ರಮ ಕೈಗೊಳ್ಳತಕ್ಕದ್ದು.

9. ಡಿಸಿಸಿ ಬ್ಯಾಂಕುಗಳು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಮೂಲಕ ಸ್ವಸಹಾಯ ಗುಂಪುಗಳಿಗೆ ಸಾಲ ವಿತರಿಸಿದಲ್ಲಿ ಸಂಘಗಳಿಗೆ ಶೇ.2ರ ಮಾರ್ಜಿನ್ ದೊರೆಯುವ ಹಾಗೆ ಪ್ಯಾಕ್ಸ್‌ಗಳಿಗೆ ಬಡ್ಡಿ ಹೊಂದಾಣಿಕೆ/ಆಕರಣೆ ಮಾಡತಕ್ಕದ್ದು.

10. ಈ ಯೋಜನೆಗೆ ಸಂಬಂಧಪಟ್ಟಂತೆ ನಬಾರ್ಡ್ ಕಾಲಕಾಲಕ್ಕೆ ಹೊರಡಿಸುವ ಮಾರ್ಗದರ್ಶಿ ಸೂತ್ರಗಳು ಯಥಾವತ್ತಾಗಿ. ಅನ್ವಯವಾಗುತ್ತವೆ. ಆದರೆ, ನಬಾರ್ಡಿನ ಸುತ್ತೋಲೆಯ ಸಂಖ್ಯೆ:ಡಿಪಿಡಿ/101, ದಿನಾಂಕ:26.02.1992ರ ಅಂಶ 16ರಲ್ಲಿ ಉಲ್ಲೇಖಿಸಿರುವಂತೆ ಸ್ವಸಹಾಯ ಗುಂಪುಗಳ ಶಿಫಾರಸ್ಸಿನ ಆಧಾರದ ಮೇಲೆ ಸಹಕಾರ ಸಂಸ್ಥೆಗಳು ಸದಸ್ಯರಿಗೆ ನೇರವಾಗಿ ಸಾಲ ನೀಡಿದಲ್ಲಿ ಅಂತಹ ಸಾಲಗಳಿಗೆ ಪ್ರಸ್ತುತ ಯೋಜನೆಯು ಅನ್ವಯವಾಗುವುದಿಲ್ಲ.

11. ಸ್ವಸಹಾಯ ಗುಂಪುಗಳು ತಮ್ಮ ಸದಸ್ಯರಿಗೆ ಯಾವ ಬಡ್ಡಿ ದರದಲ್ಲಿ ಸಾಲಗಳನ್ನು ಒದಗಿಸಬೇಕು ಎಂಬುದನ್ನು ನಿರ್ಧರಿಸಲು ಸಕ್ಷಮರಾಗಿದ್ದು ಹಾಗೆ ನಿರ್ಧರಿಸುವ ಸಂದರ್ಭದಲ್ಲಿ ಬಡ್ಡಿ ದರಗಳು ಗರಿಷ್ಠ ಶೇ.12.00ಕ್ಕಿಂತ ಮೀರತಕ್ಕದ್ದಲ್ಲ. ಅಲ್ಲದೆ ಸಾಲ ಪಡೆದ ಸದಸ್ಯರು ಸಾಲಗಳನ್ನು ಸದುಯೋಗಪಡಿಸಿಕೊಳ್ಳುವಂತೆ ಮುಂಜಾಗ್ರತೆ ಕ್ರಮವಹಿಸಬೇಕು.

12. ಯೋಜನೆಯನ್ನು ಸಮರ್ಪಕವಾಗಿ ಜಾರಿಗೊಳಿಸಲು ರಾಜ್ಯ ಮಟ್ಟದಲ್ಲಿ ಅಪೆಕ್ಸ್ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳನ್ನು ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳನ್ನು ನೋಡಲ್ ಅಧಿಕಾರಿಗಳಿಗಾಗಿ ಕಾರ್ಯನಿರ್ವಹಿಸುತಕ್ಕದ್ದು. ನೋಡಲ್ ಅಧಿಕಾರಿಗಳು ಯೋಜನೆಯನ್ನು ಸಮರ್ಪಕವಾಗಿ ಜಾರಿಗೊಳಿಸಲು ಮತ್ತು ಎಲ್ಲಾ ಪ್ಯಾಕ್ಸ್‌ಗಳು ಮತ್ತು ಡಿಸಿಸಿ ಬ್ಯಾಂಕಿನ ಶಾಖೆಗಳ ಮೂಲಕ ವಿತರಿಸಿದ ಸಾಲಗಳಿಗೆ ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಕ್ಕೆ ಬಡ್ಡಿ ಸಹಾಯಧನ ಕ್ಲೇಮು ಬಿಲ್ಲುಗಳನ್ನು ಸಲ್ಲಿಸಲು ಜವಾಬ್ದಾರರಾಗಿರತಕ್ಕದ್ದು.

13. ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ನಬಾರ್ಡಿನ ಮಾರ್ಗದರ್ಶಿ ಸೂತ್ರಗಳಂತೆ ಸ್ವಸಹಾಯ ಗುಂಪುಗಳನ್ನು ಆಯ್ಕೆ ಮಾಡತಕ್ಕದ್ದು. ಅಂತಹ ಆಯ್ಕೆಗೆ ಮುಖ್ಯವಾಗಿ ಕೆಳಕಂಡ ಮಾನದಂಡಗಳನ್ನು ಪಾಲಿಸತಕ್ಕದ್ದು.

   ಅ) ಸ್ವಸಹಾಯ ಗುಂಪು ರಚನೆಯಾಗಿ ಕನಿಷ್ಠ 6 ತಿಂಗಳ ಅವಧಿಗೆ ಕ್ರಿಯಾಶೀಲ ಅಸ್ತಿತ್ವದಲ್ಲಿರಬೇಕು.

   ಆ) ಸ್ವಸಹಾಯ ಗುಂಪು ತನ್ನ ಸ್ವಂತ ಸಂಪನ್ಮೂಲಗಳಿಂದ ಉಳಿತಾಯ ಮತ್ತು ಸಾಲ ನೀಡಿಕೆ ವ್ಯವಹಾರಗಳನ್ನು ಯಶಸ್ವಿಯಾಗಿ ಕೈಗೊಂಡಿರಬೇಕು.

   ಇ) ಎಲ್ಲ ಸದಸ್ಯರೂ ಸಕ್ರಿಯವಾಗಿ ಭಾಗವಹಿಸಿ ಪ್ರಜಾಸತ್ತಾತ್ಮಕ ರೀತಿಯಲ್ಲಿ ಗುಂಪು ಕಾರ್ಯನಿರ್ವಹಿಸುತ್ತಿದೆ ಎಂಬುದು ಸ್ಪಷ್ಟವಾಗಿ ಕಂಡುಬರಬೇಕು.

   ಈ) ಸ್ವಸಹಾಯ ಗುಂಪು ಯುಕ್ತ ಲೆಕ್ಕಪತ್ರಗಳನ್ನು ಮತ್ತು ದಾಖಲೆಗಳನ್ನು ನಿರ್ವಹಿಸುತ್ತಿರಬೇಕು.

   ಉ) ಈ ಯೋಜನೆಯಡಿ ಭಾಗವಹಿಸಿ ಲಭ್ಯವಿರುವ ಸೌಲಭ್ಯಗಳನ್ನು ಪಡೆಯಲು ಮಾತ್ರ ಗುಂಪು ಅಸ್ತಿತ್ವಕ್ಕೆ ಬಂದಿಲ್ಲ ಎಂಬುದನ್ನು ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ಖಾತ್ರಿಪಡಿಸಿಕೊಳ್ಳತಕ್ಕದ್ದು. ಸದಸ್ಯರು ಪರಸ್ಪರ ಸಹಾಯ ಮಾಡಿ ಒಟ್ಟಿಗೆ ಕೆಲಸ ಮಾಡುವ ನೈಜ ಅಗತ್ಯ ಇರಬೇಕು.

   ಊ) ಗುಂಪಿನ ಸದಸ್ಯರು ಸಾಮಾನ್ಯವಾಗಿ ಏಕರೂಪದ ಹಿನ್ನೆಲೆ ಮತ್ತು ಹಿತಾಸಕ್ತಿಗಳನ್ನು ಹೊಂದಿರಬೇಕು.

   ಋ) ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ಸ್ವಸಹಾಯ ಗುಂಪಿನ ಕುಶಲತೆವರ್ಧನೆ ಮತ್ತು ಯುಕ್ತ ಕಾರ್ಯನಿರ್ವಹಣೆಗಾಗಿ ಅಗತ್ಯ ತರಬೇತಿ ಮತ್ತು ಇತರ ಬೆಂಬಲವನ್ನು ಕೊಡಬೇಕು.

14. ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಅಗತ್ಯವಾದ ಮಾರ್ಗದರ್ಶನ ಮತ್ತು ಸೂಚನೆಗಳನ್ನು ನೀಡಲು ಸಕ್ಷಮರಾಗಿರತಕ್ಕದ್ದು.

15. ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರು ಕ್ಲೈಂ ಬಿಲ್ಲುಗಳನ್ನು ವಿಳಂಭವಿಲ್ಲದೇ ಸಕಾಲದಲ್ಲಿ ದೃಢೀಕರಿಸಿ ಕ್ಲೈಂಗೆ ಸಲ್ಲಿಸಲು ಅಗತ್ಯ ಸೂಚನೆಗಳನ್ನು ಸಂಬಂಧಪಟ್ಟವರಿಗೆ ನೀಡತಕ್ಕದ್ದು.

16. ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕಾಲಕಾಲಕ್ಕೆ ಸರ್ಕಾರ ಮತ್ತು ಸಹಕಾರ ಸಂಘಗಳ ನಿಬಂಧಕರು ನೀಡಿದ ಸೂಚನೆಗಳನ್ನು ಸಹಕಾರ ಕೃಷಿ ಪತ್ತಿನ ಸಂಸ್ಥೆಗಳು ಪಾಲಿಸತಕ್ಕದ್ದು.

17. ಪಿಎಸಿಎಸ್‌ಗಳ ಮತ್ತು ಡಿಸಿಸಿ ಬ್ಯಾಂಕುಗಳ ಕ್ಲೇಮು ಬಿಲ್ಲುಗಳನ್ನು ಡಿಸಿಸಿ ಬ್ಯಾಂಕುಗಳ ವ್ಯವಸ್ಥಾಪಕ ನಿರ್ದೇಶಕರು ತಯಾರಿಸಿ ಸಂಬಂಧಪಟ್ಟ ಜಿಲ್ಲಾ ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪನಿರ್ದೇಶಕರಿಂದ ಪ್ರಮಾಣೀಕರಿಸಿದ ನಂತರ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ದೃಢೀಕರಿಸಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನ ಮುಖಾಂತರ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು. ಕೃಷಿ ಪತ್ತಿನ ಸಹಕಾರ ಸಂಘಗಳು ವಾಣಿಜ್ಯ ಬ್ಯಾಂಕುಗಳಿಗೆ ಅಧ್ಯರ್ಪಿತಗೊಂಡಿದ್ದಲ್ಲಿ ಅಂತಹ ಬಿಲ್ಲುಗಳನ್ನು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ಉಪ ನಿರ್ದೇಶಕರಿಂದ ಪ್ರಮಾಣೀಕರಿಸಿದ ನಂತರ ಸಂಬಂಧಪಟ್ಟ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು ದೃಢೀಕರಿಸಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕಿನ ಮುಖಾಂತರ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

18. ಪಿಎಸಿಎಸ್‌ಗಳಿಗೆ/ಡಿಸಿಸಿ ಬ್ಯಾಂಕುಗಳಿಗೆ ಸಂಬಂಧಿಸಿದ ಕ್ಲೇಮು ಬಿಲ್ಲುಗಳನ್ನು ಅಪೆಕ್ಸ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರ ಮೂಲಕ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.

19. ಸಹಕಾರ ಸಂಘಗಳ ನಿಬಂಧಕರು ಸಂಬಂಧಪಟ್ಟ ಕ್ಲೇಮು/ಮನಭರಣ ಕ್ಲೇಮುಗಳನ್ನು ದೃಢೀಕೃತ ಬಿಲ್ಲುಗಳ ಆಧಾರದ ಮೇಲೆ ಸಂಬಂಧಪಟ್ಟ ಸಂಸ್ಥೆಗಳಿಗೆ ಹಣವನ್ನು ಬಿಡುಗಡೆ ಮಾಡತಕ್ಕದ್ದು ಹಾಗೂ ಹಣದ ಉಪಯೋಗದ ಬಗ್ಗೆ ತ್ರೈಮಾಸಿಕ ಪ್ರಗತಿ ವರದಿಗಳನ್ನು ಸಲ್ಲಿಸತಕ್ಕದ್ದು ಮತ್ತು ನಿಗಧಿತ ನಮೂನೆಯಲ್ಲಿ ಉಪಯೋಗ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 96 ವೆಚ್ಚ–2/2016, ದಿನಾಂಕ:24.05.2016ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

**PR. 604**

**SC. 100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ. ವೆಂಕಟಸ್ವಾಮಿ,**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ,
ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

## ಸಹಕಾರ ಸಚಿವಾಲಯ

## ತಿದ್ದುಪಡಿ

**ಸಂಖ್ಯೆ : ಸಿಒ 372 ಸಿಎಲ್‌ಎಸ್ 2016, ಬೆಂಗಳೂರು, ದಿನಾಂಕ : 29–08–2016.**

ಸಹಕಾರ ಇಲಾಖೆಯ ಸರ್ಕಾರದ ಆದೇಶ ಸಂಖ್ಯೆ: ಸಿಒ 212 ಸಿಎಲ್‌ಎಸ್ 2013, ದಿನಾಂಕ:30.03.2016 ರಲ್ಲಿ 216 ವಿವಿಧ ಸಹಕಾರ ಸಂಘಗಳಿಗೆ ಹೊಸ ಕಟ್ಟಡ/ಗೋದಾಮು ನಿರ್ಮಾಣ ಮತ್ತು ಹಳೆ ಕಟ್ಟಡಗಳ ದುರಸ್ತಿಗಾಗಿ ₹. 1549 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶಿಸಲಾಗಿರುತ್ತದೆ. ಸದರಿ ಆದೇಶದಲ್ಲಿ ಈ ಕೆಳಕಂಡ ಸಹಕಾರ ಸಂಘಗಳಿಗೆ ಅನುದಾನ ಬಿಡುಗಡೆ ಹಾಗೂ ಸ್ಥಳ ಬದಲಾವಣೆ ಮಾರ್ಪಡಿಸಿ ತಿದ್ದುಪಡಿ ಮಾಡಿ ಆದೇಶಿಸಿದೆ. ಅದರಂತೆ ಓದಿಕೊಳ್ಳತಕ್ಕದ್ದು. ಉಳಿದಂತೆ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

| ಕ್ರ. ಸಂ. | ಜಿಲ್ಲೆಯ ಹೆಸರು | ಹಾಲಿ ಮಂಜೂರಾತಿ ನೀಡಿ ಅನುದಾನ ಬಿಡುಗಡೆ ಮಾಡಿರುವ ವಿವರ | | | ತಿದ್ದುಪಡಿ ಆದೇಶ ಹೊರಡಿಸಬೇಕಾದ ವಿವರ | | |
|---|---|---|---|---|---|---|---|
| | | ಸಹಕಾರ ಸಂಘದ ಹೆಸರು | ಉದ್ದೇಶ | ಅನುದಾನದ ಮೊತ್ತ | ಸಹಕಾರ ಸಂಘದ ಹೆಸರು | ಉದ್ದೇಶ | ಅನುದಾನದ ಮೊತ್ತ |
| **1.** | ಕಲಬುರ್ಗಿ ಜಿಲ್ಲೆ | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಾದನಹಿಪ್ಪರಗ, ಆಳಂದ ತಾಲ್ಲೂಕು. | ಕಟ್ಟಡ ನಿರ್ಮಾಣ | 5.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಾದನಹಿಪ್ಪರಗ, ಆಳಂದ ತಾಲ್ಲೂಕು. | ಗೋದಾಮು ದುರಸ್ತಿ | 5.00 |
| **2.** | ಶಿವಮೊಗ್ಗ ಜಿಲ್ಲೆ | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ತಾಳಗುಪ್ಪ, ಸಾಗರ ತಾಲ್ಲೂಕು. | ಕಟ್ಟಡ ನಿರ್ಮಾಣ | 8.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ತಾಳಗುಪ್ಪ, ಸಾಗರ ತಾಲ್ಲೂಕು. | ಗೋದಾಮು ಕಟ್ಟಡ ನಿರ್ಮಾಣ | 8.00 |
| **3.** | ವಿಜಯಪುರ ಜಿಲ್ಲೆ | ಶ್ರೀ ಬೀರಲಿಂಗೇಶ್ವರ ಕುರಿ ಸಾಕಾಣಿಕೆ ಹಾಗೂ ಉಣ್ಣೆ ಉತ್ಪಾದಕರ ಸಹಕಾರಿ ಸಂಘ, ಬಳ್ಳೊಳ್ಳಿ, ಇಂಡಿ ತಾಲ್ಲೂಕು | ಕಟ್ಟಡ ನಿರ್ಮಾಣ | 7.00 | ವ್ಯವಸಾಯೋತ್ಪನ್ನ ಸೇವಾ ಸಹಕಾರಿ ಸಂಘ, ಅಂಜುಟಗಿ, ಇಂಡಿ ತಾಲ್ಲೂಕು | ಕಟ್ಟಡ ನಿರ್ಮಾಣ | 15.00 |
| | | ಶ್ರೀ ಅಮೋಘ ಸಿದ್ದೇಶ್ವರ ಪತ್ತಿನ ಸಹಕಾರ ಸಂಘ ಹೋರ್ತಿ, ಇಂಡಿ ತಾಲ್ಲೂಕು | ಕಟ್ಟಡ ನಿರ್ಮಾಣ | 8.00 | | | |
| **4.** | ಚಿಕ್ಕಮಗಳೂರು ಜಿಲ್ಲೆ | ವಿಎಸ್‌ಎಸ್‌ಎನ್, ಜಯಪುರ, ಶೃಂಗೇರಿ ತಾಲ್ಲೂಕು | ಕಟ್ಟಡ ನಿರ್ಮಾಣ | 4.00 | ವಿಎಸ್‌ಎಸ್‌ಎನ್. ಜಯಪುರ, ಕೊಪ್ಪ ತಾಲ್ಲೂಕು | ಕಟ್ಟಡ ನಿರ್ಮಾಣ | 4.00 |
| **5.** | ಚಿಕ್ಕಬಳ್ಳಾಪುರ ಜಿಲ್ಲೆ | ಟಿಎಪಿಸಿಎಂಎಸ್, ಗೌರಿಬಿದನೂರು | ಕಟ್ಟಡ ನಿರ್ಮಾಣ | 10.00 | ಟಿಎಪಿಸಿಎಂಎಸ್, ಗೌರಿಬಿದನೂರು | ಕಟ್ಟಡ ದುರಸ್ತಿ | 10.00 |
| | | ವಿಎಸ್‌ಎಸ್‌ಎನ್, ಚಿಕ್ಕಕುರುಗೋಡು, ಗೌರಿಬಿದನೂರು ತಾ. | ಕಟ್ಟಡ ನಿರ್ಮಾಣ | 5.00 | ವಿಎಸ್‌ಎಸ್‌ಎನ್, ಚಿಕ್ಕಕುರುಗೋಡು, ಗೌರಿಬಿದನೂರು ತಾ. | ಕಟ್ಟಡ ದುರಸ್ತಿ | 5.00 |

| | | | | | | | |
|---|---|---|---|---|---|---|---|
| 6. | ಬೆಳಗಾವಿ ಜಿಲ್ಲೆ | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಕಿಣಯೇ, ಬೆಳಗಾವಿ ತಾ. | ಕಟ್ಟಡ ನಿರ್ಮಾಣ | 6.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ತುಮ್ಮರಗುದ್ದಿ ಗ್ರಾಮ, ಬೆಳಗಾವಿ ತಾ. | ಕಟ್ಟಡ ನಿರ್ಮಾಣ | 6.00 |
| | | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಗೊಡಚಿ, ರಾಮದುರ್ಗ ತಾ. | ಗೋದಾಯು ನಿರ್ಮಾಣ | 7.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಗೊಡಚಿ, ರಾಮದುರ್ಗ ತಾ. | ಗೋದಾಮು ದುರಸ್ತಿ | 7.00 |
| | | ಛತ್ರಪತಿ ಶಿವಾಜಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಮಾಂಗೂರ, ಚಿಕ್ಕೋಡಿ ತಾ. | ಕಟ್ಟಡ ನಿರ್ಮಾಣ | 6.00 | ಅರಿಹಂತ ಪ್ರಾಥಮಿ ಕೃಷಿ ಪತ್ತಿನ ಸಹಕಾರ ಸಂಘ, ಮಾಂಗೂರ, ಚಿಕ್ಕೋಡಿ ತಾ. | ಕಟ್ಟದ ನಿರ್ಮಾಣ | 6.00 |
| 7. | ಬೀದರ್ ಜಿಲ್ಲೆ | ಪಟ್ಟಣ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಬ್ಯಾಂಕ್, ಹುನುನಾಬಾದ್, | ಕಟ್ಟಡ ದುರಸ್ತಿ | 6.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಹುಮನಾಬಾದ್ | ಕಟ್ಟಡ ದುರಸ್ತಿ | 6.00 |
| | | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ, ಸಂಘ, ದುಮ್ಮನಸೂರ್, ಹುಮನಾಬಾದ್ ತಾ. | ಗೋದಾಮು ನಿರ್ಮಾಣ | 8.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ, ಸಂಘ, ನಿ., ತಾಳಮಾಡಗಿ, ಹುಮನಾಬಾದ್ ತಾ. | ಗೋದಾಮು ನಿರ್ಮಾಣ | 8.00 |
| | | ತಾಲ್ಲೂಕು ವ್ಯವಸಾಯ ಉತ್ಪನ್ನ ಮಾರಾಟ ಸಹಕಾರ ಸಂಘ ನಿ., ಭಾಲ್ಕಿ | ಕಟ್ಟಡ ನಿರ್ಮಾಣ | 8.00 | ಟಿಎಪಿಸಿಎಂಎಸ್, ಹುಮನಾಬಾದ್ | ಕಟ್ಟಡ ನಿರ್ಮಾಣ | 8.00 |
| 8. | ದಾವಣಗೆರೆ ಜಿಲ್ಲೆ | ಪ್ರಾಥಮಿ ಕೃಷಿ ಪತ್ತಿನ ಸಹಕಾರ ಸಂಘ ನಿ., ಕಣವೆ ಬೆಳಲಗೆರೆ ಗ್ರಾಮ ಚನ್ನಗಿರಿ ತಾ. | ಕಛೇರಿ/ ಗೋದಾಮು ದುರಸ್ತಿ | 2.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಬೆಳಲಗೆರೆ ಗ್ರಾಮ ಚನ್ನಗಿರಿ ತಾ. | ಕಛೇರಿ/ ಗೋದಾಮು ದುರಸ್ತಿ | 2.00 |
| | | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ದೊಡ್ಡರಂಗವ್ವನಹಳ್ಳಿ, ಮಾಯಕೊಂಡ ಕ್ಷೇತ್ರ | ಕಟ್ಟಡ ನಿರ್ಮಾಣ | 5.00 | ಈಚಿಕಟ್ಟು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಮಾಯಕೊಂಡ ಕ್ಷೇತ್ರ | ಕಟ್ಟಡ ನಿರ್ಮಾಣ | 5.00 |
| 9. | ಗದಗ ಜಿಲ್ಲೆ | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಹಿರೇವಡ್ಡಟ್ಟಿ, ರೋಣ ತಾ. | ಕಟ್ಟಡ ನಿರ್ಮಾಣ | 7.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಹಿರೇವಡ್ಡಟ್ಟಿ, ಮುಂಡರಗಿ | ಕಟ್ಟಡ ನಿರ್ಮಾಣ | 7.00 |
| | | ವಿ.ಎಸ್.ಎಸ್.ಎನ್., ಹುಣಸಿಕಟ್ಟೆ, ನರಗುಂದ ತಾ. | ಕಟ್ಟಡ ನಿರ್ಮಾಣ | 6.00 | ಹುಣಸಿಕಟ್ಟೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಜಗಾಪೂರ, ನರಗುಂದ ತಾ. | ಕಟ್ಟಡ ನಿರ್ಮಾಣ | 6.00 |
| | | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ನಿ., ಅಡರಕಟ್ಟಿ, ಗದಗ ತಾ. | ಕಟ್ಟಡ ನಿರ್ಮಾಣ | 6.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ ನಿ., ಅಡರಕಟ್ಟಿ, ಶಿರಹಟ್ಟಿ ತಾ. | ಕಟ್ಟಡ ನಿರ್ಮಾಣ | 6.00 |
| 10. | ಮಂಡ್ಯ ಜಿಲ್ಲೆ | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಸುಂಕಾತೊಣ್ಣೂರು, ಪಾಂಡವಪುರ ತಾ. | ಕಟ್ಟಡ ನವೀಕರಣ/ ದುರಸ್ತಿಗಾಗಿ | 7.00 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಸುಂಕಾತೊಣ್ಣೂರು, ಪಾಂಡವಪುರ ತಾ. | ಕಟ್ಟಡ ನಿರ್ಮಾಣ | 7.00 |

**PR. 605**

**SC. 50**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಕೃಷ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ–3,

ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ವಿಷಯ :** ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿಗೆ ನೇರ ಸಾಲ ಪದ್ಧತಿಯಡಿ ರಾಜ್ಯ ಸರ್ಕಾರದ ಶೇ.5ರ ಭಾಗದ ವಂತಿಗೆ ಬಿಡುಗಡೆ ಮಾಡುವ ಕುರಿತು ಆದೇಶ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಇ 115 ರರವಿ 2016, ದಿನಾಂಕ: 26.04.2016
2) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಆರ್‌ಸಿಎಸ್/ಎಲ್‌ಡಿಬಿ–2/04/2016–17, ದಿನಾಂಕ :28–04–2016.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2016–17ನೇ ಸಾಲಿಗೆ ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು ನೇರ ಸಾಲ ಪದ್ಧತಿಯಡಿ ನಬಾರ್ಡ್‌ನಿಂದ ಪುನರ್ಧನ ಪಡೆಯುವ ಯೋಜನೆ ಲೆಕ್ಕ ಶೀರ್ಷಿಕೆ 6416–00–190–1–01–395 ರಡಿ ರೂ. 500.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ : 01–04–2016 ರಿಂದ 31–03–2017ರವರೆಗೆ ಮುಂದುವರೆಸಲು ಸರ್ಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ: (2)ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀನ ಅಭಿವೃದ್ಧಿ ಬ್ಯಾಂಕು (ಕಸ್ಕಾರ್ಡ್ ಬ್ಯಾಂಕ್) ನೇರ ಸಾಲದ ಮೂಲಕ ಪುನರ್ಧನ ಬಿಡುಗಡೆಗಾಗಿ ನಬಾರ್ಡ್ ಸಂಸ್ಥೆಗೆ ಸಲ್ಲಿಸಿದ ಪ್ರಸ್ತಾವನೆಯನ್ನು ಪರಿಗಣಿಸಿ ನಬಾರ್ಡ್ ಕಸ್ಕಾರ್ಡ್ ಬ್ಯಾಂಕ್‌ಗೆ ಅರ್ಹ ಮೊತ್ತವಾಗಿ ಪರಿಗಣಿಸಿರುವ ರೂ. 1,51,20,02,600/– ಮೊತ್ತದಲ್ಲಿ ತನ್ನ ಪಾಲಿನ ಶೇ.90 ರಷ್ಟು ಪುನರ್ಧನ ರೂ. 1,24,59,15,900/– ಮೊತ್ತವನ್ನು ಕಸ್ಕಾರ್ಡ್ ಬ್ಯಾಂಕಿಗೆ ಬಿಡುಗಡೆ ಮಾಡಿದ್ದು, ರಾಜ್ಯ ಸರ್ಕಾರದ ವಂತಿಗೆ ಶೇ.5 ರಷ್ಟು ಅಂದರೆ ರೂ. 6,94,15,989/– ಗಳನ್ನು ಕಸ್ಕಾರ್ಡ್ ಬ್ಯಾಂಕಿಗೆ ಬಿಡುಗಡೆ ಮಾಡಲು ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 292 ಸಿಎಲ್‌ಎಸ್ 2016, ಬೆಂಗಳೂರು, ದಿನಾಂಕ : 22–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕು ನೇರ ಸಾಲ ಪದ್ಧತಿಯ ಯೋಜನೆ ಲೆಕ್ಕ ಶೀರ್ಷಿಕೆ 6416–00–190–1–01–395ರಡಿ ರಾಜ್ಯ ಸರ್ಕಾರದ ಶೇ.5ರ ಭಾಗದ ವಂತಿಗೆಯಾದ ರೂ. 6,94,15,989/– ಗಳ ಪೈಕಿ ರೂ. 5,00,00,000/– (ಐದು ಕೋಟಿ ರೂಪಾಯಿಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿರುವ ಕರ್ನಾಟಕ ರಾಜ್ಯ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕಿನ ಖಾತೆಗೆ ಜಮಾ ಮಾಡತಕ್ಕದ್ದು ಮತ್ತು ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಆಇ 117 ವೆಚ್ಚ–2/2016, ದಿನಾಂಕ : 06–08–2016 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಿದೆ.

**P.R. 584**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಸಹಕಾರ ಸಚಿವಾಲಯ**

**ವಿಷಯ :** 2016–17ನೇ ಸಾಲಿಗೆ ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಅನುದಾನ ಬಿಡುಗಡೆ ಆದೇಶ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಇ 115 ರರವಿ 2016, ದಿನಾಂಕ: 26.04.2016
2) ಸರ್ಕಾರದ ಆದೇಶ ಸಂಖ್ಯೆ : ಸಿಒ 247 ಸಿಎಲ್‌ಎಸ್ 2016, ದಿನಾಂಕ : 28–07–2016.
3) ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಸಿಬ್ಬಂದಿ/18/ಇಜಿಪಿ/ಎಂಪಿ/16–17, ದಿನಾಂಕ : 09–08–2016.
4) ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 3 ಟಿಎಫ್‌ಪಿ 2016, ದಿನಾಂಕ : 02–04–2016.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಸಹಕಾರ ಇಲಾಖೆಯಲ್ಲಿ 2016–17ನೇ ಸಾಲಿನ ಮುಂದುವರೆದ ಯೋಜನೆಯಾಗಿ ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–004–0–01–059ರಡಿ ರೂ. 10.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ : 01–04–2016 ರಿಂದ 31–03–2017ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ: (2)ರಲ್ಲಿ ಓದಲಾದ ಆದೇಶದಲ್ಲಿ 2016–17ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2425–00–004–0–01–059 ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಕಲ್ಪಿಸಿರುವ ರೂ. 10.00 ಲಕ್ಷಗಳ ಪೈಕಿ ಶೇ.25 ರಷ್ಟು ರೂ. 2.50 ಲಕ್ಷಗಳ ಮೊದಲ ಕಂತಿನ ಹಣವನ್ನು ಬಿಡುಗಡೆ ಮಾಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2016–17ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ 2425–00–004–0–01–059 ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಕಲ್ಪಿಸಿರುವ ರೂ. 10.00 ಲಕ್ಷಗಳ ಪೈಕಿ ಶೇ.25 ರಷ್ಟು ರೂ. 2.50 ಲಕ್ಷಗಳ ಮೊದಲ ಕಂತಿನ ಹಣವನ್ನು ಮೇಲೆ ಓದಲಾದ (2)ರ ಆದೇಶದಲ್ಲಿ ಬಿಡುಗಡೆ ಮಾಡಿರುವುದನ್ನು ಶೇ. 97ರಷ್ಟು ವೆಚ್ಚ ಮಾಡಿರುವುದಾಗಿ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿ ಈ ಯೋಜನೆಯಡಿ ರೂ. 2.50 ಲಕ್ಷಗಳ ಎರಡನೆ ಕಂತಿನ ಹಣವನ್ನು ಬಿಡುಗಡೆ ಮಾಡಲು ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶದ ಕಂಡಿಕೆ (8)ರ ಅವಕಾಶದಂತೆ ಆಯವ್ಯಯದ ಅವಕಾಶದ ಶೇ.50 ರಷ್ಟು ಮೊಬಲಗನ್ನು ಬಿಡುಗಡೆ ಮಾಡಲು ಅವಕಾಶವಿರುತ್ತದೆ. ನಿಬಂಧಕರ ಪ್ರಸ್ತಾವೆಯನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 247 ಸಿಎಲ್ಎಸ್ 2016, ಬೆಂಗಳೂರು, ದಿನಾಂಕ : 22–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2016–17ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2425–00–004–0–01–059 ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಒದಗಿಸಿರುವ ರೂ. 10.00 ಲಕ್ಷಗಳ ಪೈಕಿ ಎರಡನೇ ಕಂತಿನಲ್ಲಿ ಯೋಜನೆಯ ಶೇ.25 ರಷ್ಟು ರೂ. 2.50 ಲಕ್ಷ (ಎರಡು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿ ಆದೇಶಿಸಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ನಿಬಂಧಕರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ. ಈ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 3 ಟಿಎಫ್‌ಪಿ 2016, ದಿನಾಂಕ : 02–04–2016ರಲ್ಲಿ ಸರ್ಕಾರದ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದ ಮೇರೆಗೆ ಹೊರಡಿಸಿದೆ.

**P.R. 585**

**S.C. 25**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಾಧಾಕೃಷ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ–3,
ಸಹಕಾರ ಇಲಾಖೆ.

## FOREST, ECOLOGY AND ENVIRONMENT SECRETARIAT

**Subject :** Diversion of 53.592 ha. of forest land in Gunda RF, Gunda Extension RF, Nandibande RF, Shivapura Extn. RF, Shivapura RF and Chilakanahatti Sandal RF of Bellary Division for widenlng of NH-13 from Hospet-Chitradurga Section (KM 299.00 to 418.60). in favour of the General Manager(Tech) and Project Director, National Highways Authority of India, Dharwad-reg.

**Read :**
1) Principal Chief Conservator of Forests (Head of Forest Force), Bengaluru Letter No. A5(4),GFL.CR.2/2011-12, dt. 19-01-2013.
2) Government of Karnataka Letter No. FEE 11 FLL 2013, dt : 05-04-2013.
3) Government of India, M/o Environment and Forests and Climate Change Letter F.No. 8-43/2013-FC, dt. 16-05-2014.
4) Principal Chief Conservator of Forests (Head of Forest Force), Bengaluru Letter No. A5(4).GFL.CR.2/2011-12, dt. 20-06-2016.
5) Government of India, M/o Environment and Forests and Climate Change Letter No. F.No.4-KRB 947/2013/BAN/407, dt : 24-06-2016.

**Preamble:**

The Principal Chief. Conservator of Forests (Head of Forest Force), Bengaluru vide letter under read at (1) had submitted a proposal for diversion of 53.592 ha. of forest land in Gunda. RF, Gunda Extension RF, Nandibande RF, Shivapura Extn. RF, Shivapura RF and Chilakanahatti Sandal RF of Ballari Division for widening of NH-13 from Hospet-Chitradurga Section(KM 299.000 to 418.60) in favour of the General Manager(Tech) and Project Director, National Highways Authority of India, Dharwad subject to certain conditions.

After verification, the proposal along with recommendation by Government of Karnataka was forwarded to Government of India seeking sanction u/s 2 of the Forest (Conservation) Act, 1980 vide letter under read at (2).

The Govt. of India, Ministry of Environment and Forests and Climate Change, Regional Office (Southern Zone), Bengaluru vide its letter under read at (3) have accorded in-principle (Stage-1) approval for the proposal subject to fulfillment of certain conditions. The same was communicated to the Principal Chief Conservator of Forests (Head of Forest Force), Bengaluru with a direction to submit compliance report on fulfillment of conditions.

The Principal Chief Conservator of Forests (Head of Forest Force), Bengaluru vide letter under read at (4) had furnished the compliance report and requested to obtain final approval of Government of India u/s 2 of the Forest (Conservation) Act, 1980.

The Government of India, Ministry of Environment and Forests & Climate Change, Regional-Office (Southern Zone), Bengaluru vide their letter read at (5) above under reference have accorded and communicated the final approval (Stage-II) for the proposal u/s 2 of the Forest (Conservation) Act, 1980 subject to certain conditions. Accordingly the proposal has been examined in detail and hence the following order.

**Government Order No. FEE 11 FLL 2013, Bengaluru, Dated:17-08-2016**

Under the circumstances explained in the preamble approval of Government is accorded u/s 2 of Forest (Conservation) Act, 1980 for diversion of 53.592 ha. of, forest land in Gunda RF, Gunda Extension RF, Nandibande RF, Shivapura Extn. RF, Shivapura RF and Chilakanahatti Sandal RF of Ballari Division for widening of NH-13 from Hospet-Chitradurga Section (KM 299.000 to 418.60) in favour of the General Manager (Tech) and Project Director, National Highways Authority of India, Dharwad subject to following conditions.

1) The legal status of forest land shall remain unchanged and it will continue to be as forest land.
2) The Compensatory Afforestation (CA) shall be raised over the degraded forest land, twice in extent of the forest land being diverted at Sunkadakallu R.F. of Kudligi Range, Ballari division, at the cost of the User Agency. The State Government shall obtain prior permission of Central Government for any change of Compensatory Afforestation site.
3) Handing and taking over of land and commencement of work in the land shall be done within a period of one year from the date of Stage-II approval. The forest land shall be used only for the purpose for which it is diveted.
4) The DGPS readings and location maps of the degraded forest land identified for compensatory afforestation as well as the forest land diverted shall be communicated to Govt. of India, M/o Environment and Forests, Regional Office (Southern Zone), Kendriya Sadan, 4th Floor, E and F wings, 17$^{th}$ Main Road, 2$^{nd}$ Block, Koramangala, Bengaluru-560 034 within 30 days of transfer of the forest land.
5) Violation of any of the conditions shall invite penal action, as deemed fit by the Additional Principal Chief Conservator of Forests (Central), Regional Office, Bengaluru.
6) The lessee shall pay lease rent as fixed by the Government from time to time.
7) The lease tenure is for a period of 20 (twenty) years.
8) The leased. out area should be used for the purpose for which it is granted. In case the land is not used for the stipulated purpose within one year or when it is no longer needed for the stipulated purpose, the area should be resumed to the Forest Dept, u/s 82 of Karnataka Forest Act, 1963. The concerned Chief Conservator of Forests/Deputy Conservator of Forests is authorized to take necessary action in this regard.
9) No residential buildings shall be permitted in the proposed forest area .
10) The Karnataka Forest Act, 1963. and Rules, 1969 and other relevant Acts & Rules will be applicable for any violation.
11) The compensatory afforestation shall be raised at the cost of user agency over prevailing at the time of approval (at present it is Rs. 2,34,000/- per ha.) any extent as approved by the Ministry of Environment.
12) Avenue Plantation shall be taken up along the road on either side (200 plants per km) at the project cost. The plantation shall be maintained at the project cost for 7 years.
13) The user agency has to pay the Net Present Value (NPV) of forest land diverted under this proposal as per Orders dated:28-3-2008 and 09-05-2008 of the Hon'ble Supreme Court of India.
14) The user agency shall ensure that there should be no damage to the available fauna and other flora.
15) The user agency should pay cost of soil erosion controlling measures, in accordance with the estimate prepared by the concerned DCFs to be carried out at the adjacent forest areas to a width of 100 mtrs all along the road.
16) The shoulder drains should be suitably covered with stone pitching in order to control soil erosion.
17) No crushing/breaking of stones shall be allowed inside forest area. Readymade material shall be used for improvement of such road.
18) No labour camp shall be established on the forest land.
19) All waste/debris generated shall be scientifically disposed off outside forest area.
20) AII precautions shall be taken to ensure fire protection to the forest when the road is being land.
21) No work shall be allowed after sunset.
22) Any damage to forest area due to such development works shall be compensated by the user agency. The extent of damage shall be assessed by the concerned Deputy Conservator of Forests.
23) The lessee shall not sub-lease, mortgage or hypothecate the forest area.
24) The approval under the Forest (Conservation) Act, 1980 is subject to the clearance under the Environment (Protection) Act, 1986, if required.
25) The user agency shall abide by all the conditions imposed upon by the Government of India, the Government of Karnataka and the Principal Chief Conservator of Forests (Head-of Forest Force).

By order and in the name of the Governor of Karnataka
**L.Sharada,**
Under Secretary to Government,
Forest, Ecology and Environment Department.

**P.R. 583**
**S.C. 50**

## ಸಹಕಾರ ಸಚಿವಾಲಯ

**ವಿಷಯ :** 2015-16ನೇ ಸಾಲಿನಲ್ಲಿ ಕೃಷಿ ಸಾಲಗಳ ಮೇಲಿನ ಬಡ್ಡಿ ರಿಯಾಯಿತಿ ಯೋಜನೆಯಡಿಯಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಸ್ಥೆಗಳು ನೀಡುವ ಮಧ್ಯಮಾವಧಿ ಕೃಷಿ ಸಾಲಗಳಿಗೆ ಬಡ್ಡಿ ಸಹಾಯಧನ ದರ ನಿಗಧಿಪಡಿಸುವ ಕುರಿತು ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ:ಸಿಒ 182 ಸಿಎಲ್ಎಸ್ 2015, ದಿನಾಂಕ: 26.10.2015.
2. ಸರ್ಕಾರದ ಆದೇಶ ಸಂಖ್ಯೆ:ಸಿಒ 208 ಸಿಎಲ್ಎಸ್ 2015, ದಿನಾಂಕ: 12.08.2015.
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಸಿಆರ್‌ಡಿ/ಸಿಎಬಿ-1/46/2015-16, ದಿನಾಂಕ:27.07.2016.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ರಾಜ್ಯದ ರೈತರಿಗೆ ಪತ್ತಿನ ಸಹಕಾರಿ ಸಂಸ್ಥೆಗಳು ಶೇಕಡಾ 3 ರ ಬಡ್ಡಿ ದರದಲ್ಲಿ ಮಧ್ಯಮಾವಧಿ ಮತ್ತು ದೀರ್ಘವಧಿ ಕೃಷಿ ಮತ್ತು ಕೃಷಿ ಸಂಬಂಧಿತ ಸಾಲುಗಳನ್ನು ನೀಡುವ ಯೋಜನೆಯನ್ನು 2015-16ನೇ ಸಾಲಿಗೆ ಮುಂದುವರೆಸಿ ಆದೇಶ ಹೊರಡಿಸಲಾಗಿರುತ್ತದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2014-15 ನೇ ಸಾಲಿನಲ್ಲಿ ಕೃಷಿ ಪತ್ತಿನ ಸಹಕಾರಿ ಸಂಸ್ಥೆಗಳು ರೈತರಿಗೆ ವಿತರಿಸಿದ ಮಧ್ಯಮಾವಧಿ ಕೃಷಿ ಸಾಲಗಳಿಗೆ ಶೇ.9.50 ಹಾಗೂ ಡಿಸಿಸಿ ಬ್ಯಾಂಕ್‌ಗಳ ಶಾಖೆಗಳ ಮೂಲಕ ನೇರವಾಗಿ ವಿತರಿಸಿದ ಸಾಲಗಳಿಗೆ ಶೇ.8.50 ಬಡ್ಡಿ ಸಹಾಯಧನವನ್ನು ನಿಗಧಿಪಡಿಸಲಾಗಿರುತ್ತದೆ.

ಮೇಲೆ (3) ರಲ್ಲಿ ಓದಲಾದ ದಿನಾಂಕ: 26.05.2015 ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು 2015-16 ನೇ ಸಾಲಿನಲ್ಲಿ ವಿತರಿಸಿದ ಸಾಲಗಳಿಗೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ಗಳಿಗೆ ಕ್ರಮವಾಗಿ ಶೇ.9.5 ಹಾಗೂ ಶೇ.8.5 ರ ದರ ನಿಗಧಿಪಡಿಸಿ ಮತ್ತು ರೈತರಿಂದ ವಸೂಲಿ ಮಾಡಿದ ಶೇ.3 ರ ಬಡ್ಡಿದರದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘಗಳು ತಮ್ಮ ಮಾರ್ಜಿನ್ ಆಗಿ ಶೇ.2.50ನ್ನು ಉಳಿಸಿಕೊಂಡು ಶೇ.0.50 ಮಾರ್ಜಿನ್‌ನ್ನು ಜಿಲ್ಲಾ ಕೇಂದ್ರ ಸಹಕಾರಿ ಬ್ಯಾಂಕ್‌ಗಳಿಗೆ ವರ್ಗಾಯಿಸಿ ಆದೇಶ ಹೊರಡಿಸುವಂತೆ ಕೋರಿ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:, ಸಿಒ 578 ಸಿಎಲ್ಎಸ್ 2016, ಬೆಂಗಳೂರು, ದಿನಾಂಕ: 25.08.2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2015-16ನೇ ಸಾಲಿನಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳು ರೈತರಿಗೆ ವಿತರಿಸಿದ ಮಧ್ಯಮಾವಧಿ ಸಾಲಗಳಿಗೆ ಕ್ರಮವಾಗಿ ಶೇ.9.5 ಮತ್ತು ಶೇ.8.5ರ ದರದಲ್ಲಿ ಬಡ್ಡಿ ಸಹಾಯಧನವನ್ನು ನಿಗಧಿಪಡಿಸಿ ಆದೇಶಿಸಲಾಗಿದೆ.

ರೈತರಿಂದ ವಸೂಲಿ ಮಾಡಿದ ಶೇ.3ರ ಬಡ್ಡಿದರವನ್ನು ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ಗಳು ಕ್ರಮವಾಗಿ ಶೇ.2.50 : 0.50 ಅನುಪಾತದಲ್ಲಿ ಮಾರ್ಜಿನ್ ಮೊತ್ತವನ್ನು ನಿಗಧಿಪಡಿಸಿ ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 156 ವೆಚ್ಚ-2/2016, ದಿನಾಂಕ:11.08.2016 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಾಧಾಕೃಷ್ಣ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ.

PR. 634

SC. 100

## ಶಿಕ್ಷಣ ಸಚಿವಾಲಯ

**ವಿಷಯ :** ತುಮಕೂರಿನ ಶ್ರೀ ಸಿದ್ದಗಂಗಾ ಶಿಕ್ಷಣ ಸಂಸ್ಥೆಯ ಆಡಳಿತಕ್ಕೊಳಪಟ್ಟಿರುವ ಶ್ರೀ ಸಿದ್ದಗಂಗಾ ಕಲಾ, ವಾಣಿಜ್ಯ ಸಂಜೆ ಕಾಲೇಜನ್ನು ಹಾಗೂ ಅಲ್ಲಿನ ಬೋಧಕ/ಬೋಧಕೇತರರ ಸಿಬ್ಬಂದಿಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು.

**ಓದಲಾಗಿದೆ :**
1) ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತಾಲಯದ ಪ್ರಸ್ತಾವನೆ ಸಂಖ್ಯೆ:ಕಾಶಿಇ/48/ವೇಅ/2012-13/ನೇವಿ, ದಿನಾಂಕ:01-02-2013.
2) ಸಚಿವ ಸಂಪುಟದ ಪ್ರಕರಣ ಸಂಖ್ಯೆ:ಸಿ:228/2013, ದಿನಾಂಕ:19-03-2013.
3) ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 238 ವೆಚ್ಚ-8/2014, ದಿನಾಂಕ:01-03-2014.

4) ಸರ್ಕಾರದ ಆದೇಶ ಸಂಖ್ಯೆ:ಇಡಿ 75 ಯುಪಿಸಿ 96, ದಿನಾಂಕ:20–05–1996.

5) ಕಾಲೇಜು ಶಿಕ್ಷಣ ಇಲಾಖೆಯ ಪತ್ರ ಸಂಖ್ಯೆ:ಕಾಶಿಇ/48/ವೇಅ/2012–13/ನೇವಿ–1, ದಿನಾಂಕ:08–09–2015, ದಿನಾಂಕ:27–01–2016, ದಿನಾಂಕ:06–05–2016 ಮತ್ತು ದಿನಾಂಕ:14–06–2016.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಕಾಲೇಜು ಶಿಕ್ಷಣ ಇಲಾಖೆ ಆಯುಕ್ತರ ಪ್ರಸ್ತಾವನೆಯಲ್ಲಿ ತುಮಕೂರಿನ ಶ್ರೀ ಸಿದ್ದಗಂಗಾ ಶಿಕ್ಷಣ ಸಂಸ್ಥೆಯ ಆಡಳಿತಕ್ಕೊಳಪಟ್ಟಿರುವ ಶ್ರೀ ಸಿದ್ದಗಂಗಾ ಕಲಾ, ವಾಣಿಜ್ಯ ಸಂಜೆ ಕಾಲೇಜು, ತುಮಕೂರು ಇದು 1966–67ನೇ ಸಾಲಿನಲ್ಲಿ ಪ್ರಾರಂಭವಾಗಿದ್ದು, 1986–87ನೇ ಸಾಲಿಗಿಂತ ಮೊದಲೇ ಪ್ರಾರಂಭವಾಗಿರುವುದರಿಂದ ಸದರಿ ಕಾಲೇಜನ್ನು ವೇತನನಾನುದಾನಕ್ಕೆ ಒಳಪಡಿಸುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಅಲ್ಲದೆ ಸದರಿ ಕಾಲೇಜು ಸ್ವಂತ ಕಟ್ಟಡವನ್ನು ಹೊಂದಿದ್ದು, 660ಕ್ಕೂ ಹೆಚ್ಚು ವಿದ್ಯಾರ್ಥಿಗಳು ಸದರಿ ಕಾಲೇಜಿನಲ್ಲಿ ಅಧ್ಯಯನ ಮಾಡುತ್ತಿದ್ದಾರೆ. ಸದರಿ ಕಾಲೇಜಿನ ಗ್ರಂಥಾಲಯದಲ್ಲಿ ವಿದ್ಯಾರ್ಥಿಗಳ ಸಂಖ್ಯೆಗನುಗುಣವಾಗಿ ಪುಸ್ತಕಗಳಿರುತ್ತವೆ. ಕಾಲೇಜಿಗೆ ಆಟದ ಮೈದಾನವಿರುತ್ತದೆ. ಒಟ್ಟಾಗಿ ಎಲ್ಲಾ ಮೂಲಭೂತ ಸೌಲಭ್ಯಗಳನ್ನು ಕಾಲೇಜು ಹೊಂದಿರುವುದರಿಂದ ಸದರಿ ಕಾಲೇಜಿನ ಬೋಧಕ/ಬೋಧಕೇತರ ಸಿಬ್ಬಂದಿಗಳನ್ನು ಸರ್ಕಾರದ ಆದೇಶ ಸಂಖ್ಯೆ:ಇಡಿ 146 ಯುಪಿಸಿ 79, ದಿನಾಂಕ:03–10–1981ರ ಪ್ರಕಾರ ಹುದ್ದೆಗಳನ್ನು ಭರ್ತಿ ಮಾಡಬೇಕಾಗಿರುತ್ತದೆ ಎಂದು ತಿಳಿಸಿ, ಸದರಿ ಕಾಲೇಜು ಹಾಗೂ ಕಾಲೇಜಿನ ಬೋಧಕ/ಬೋಧಕೇತರರನ್ನು ವೇತನಾನುದಾನಕ್ಕೆ ಒಳಪಡಿಸಿದಲ್ಲಿ ವಾರ್ಷಿಕವಾಗಿ ಸುಮಾರು ₹.1.08 ಕೋಟಿ ವೆಚ್ಚ ಬರುವುದಾಗಿ ತಿಳಿಸಿರುತ್ತಾರೆ.

ಮೇಲೆ ಓದಲಾದ (2)ರಲ್ಲಿ ದಿನಾಂಕ:19–03–2013 ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ಶ್ರೀ ಸಿದ್ದಗಂಗಾ ಕಲಾ, ವಾಣಿಜ್ಯ ಸಂಜೆ ಕಾಲೇಜು, ತುಮಕೂರು ಹಾಗೂ ಸದರಿ ಕಾಲೇಜಿನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಬೋಧಕ/ಬೋಧಕೇತರ ನೌಕರರುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (4)ರ ಸರ್ಕಾರಿ ಆದೇಶದಲ್ಲಿ ದಿನಾಂಕ:01–06–1992ರ ನಂತರ ಮಾಡಿಕೊಳ್ಳುವ ನೇಮಕಾತಿಗಳಲ್ಲಿ ಯಾವುದೇ ಕಾರಣಕ್ಕೂ ಮೀಸಲಾತಿ ಉಲ್ಲಂಘನೆಯನ್ನು ಮನ್ನಾ ಮಾಡಲು ಅವಕಾಶವಿಲ್ಲ ಮತ್ತು ನೇಮಕಾತಿ ಅನುಮೋದನೆ ಕುರಿತು ಸರ್ಕಾರ ಕಾಲಕಾಲಕ್ಕೆ ಹೊರಡಿಸಿದ ಇತರೆ ಎಲ್ಲಾ ಸೂಚನೆಗಳನ್ನು ಕಡ್ಡಾಯವಾಗಿ ಪಾಲಿಸಬೇಕು ಎಂದು ತಿಳಿಸಲಾಗಿದೆ.

ಮೇಲೆ ಓದಲಾದ (4)ರ ಸರ್ಕಾರದ ಆದೇಶದಂತೆ ಮೇಲೆ ಓದಲಾದ (2)ರ ಸಚಿವ ಸಂಪುಟದ ತೀರ್ಮಾನವನ್ನು ಹಾಗೂ ಮೇಲೆ ಓದಲಾದ (1 & 5)ರ ಕಾಲೇಜು ಶಿಕ್ಷಣ ಇಲಾಖೆಯ ಆಯುಕ್ತಾಲಯದ ಪ್ರಸ್ತಾವನೆ/ಪತ್ರಗಳನ್ನು ಪರಿಶೀಲಿಸಲಾಯಿತು. ಅದರಂತೆ, ಶ್ರೀ ಸಿದ್ದಗಂಗಾ ಕಲಾ, ವಾಣಿಜ್ಯ ಸಂಜೆ ಕಾಲೇಜು, ತುಮಕೂರು ಈ ಕಾಲೇಜಿನಲ್ಲಿ ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳಲ್ಲಿ ಮೀಸಲಾತಿ ನಿಯಮದಂತೆ ಎರಡು ಹುದ್ದೆಗಳಲ್ಲಿ ಒಂದೊಂದು ಹುದ್ದೆಗಳನ್ನು ಪರಿಶಿಷ್ಟ ಜಾತಿಯ ಅಭ್ಯರ್ಥಿಗಳಿಗೆ ಮೀಸಲಿರಿಸಿ ಪ್ರಸ್ತುತ ಸದರಿ ಕಾಲೇಜಿನಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಹಾಗೂ ಸೇವಾ ಹಿರಿತನದ ಆಧಾರದ ಮೇಲೆ ಈ ಕೆಳಕಂಡ ಕನ್ನಡ ವಿಷಯದಲ್ಲಿ ಶ್ರೀಮತಿ ರತ್ನಮಂಜರಿ ಕೆ.ಜಿ. ಇತಿಹಾಸ ವಿಷಯದಲ್ಲಿ ಡಾ:ಸಿ. ತಿಮ್ಮಪ್ಪ, ಅರ್ಥಶಾಸ್ತ್ರ ವಿಷಯದಲ್ಲಿ ಶ್ರೀ ಮಹದೇವಸ್ವಾಮಿ ಎನ್.ಎಸ್., ರಾಜ್ಯಶಾಸ್ತ್ರ ವಿಷಯದಲ್ಲಿ ಶ್ರೀಮತಿ ಅರುಣಕುಮಾರಿ ಎಸ್.ಕೆ., ಗಣಕವಿಜ್ಞಾನ ವಿಷಯದಲ್ಲಿ ಶ್ರೀ ರಾಮಲಿಂಗರೆಡ್ಡಿ ಎಸ್., ಮತ್ತು ಗ್ರಂಥಪಾಲಕರ ಹುದ್ದೆಯಲ್ಲಿ ಶ್ರೀ ಕುಮಾರಸ್ವಾಮಿ ಹೆಚ್.ಜಿ. ಇವರನ್ನು ಹಾಗೂ ಬೋಧಕೇತರರ ನೌಕರರಲ್ಲಿ ಶ್ರೀ ಪ್ರಕಾಶ್ ಆರ್., ಅಧೀಕ್ಷಕರು, ಶ್ರೀಮತಿ ಭವ್ಯ ಹೆಚ್.ಸಿ., ದ್ವಿತಿಯ ದರ್ಜೆ ಸಹಾಯಕರು, ಶ್ರೀ ಸಿದ್ದೇಶ್, ಅಟೆಂಡರ್, ಶ್ರೀಮತಿ ಶಿವರಾಜಮ್ಮ ಕೆ.ಜಿ. ಗ್ರಂಥಾಲಯ ಸಹಾಯಕರು ಹಾಗೂ ಪರಿಚಾರಕರ ಹುದ್ದೆಯಲ್ಲಿ ಶ್ರೀ ನಿರಂಜನ್ ಕೆ.ಸಿ. ಶ್ರೀ ಮುಕುಂದಯ್ಯ ಕೆ.ಆರ್. ಶ್ರೀ ನಾಗರಾಜು ಇವರುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಹಾಗೂ ಒಂದು ಕನ್ನಡ ಉಪನ್ಯಾಸಕರ, ಒಂದು ಇತಿಹಾಸ ಉಪನ್ಯಾಸಕರ, ಒಂದು ದ್ವಿತೀಯ ದರ್ಜೆ ಸಹಾಯಕರ, ಒಂದು ಅಟೆಂಡರ್ ಹುದ್ದೆಯನ್ನು ತಕ್ಷಣವೇ ಪರಿಶಿಷ್ಟ ಜಾತಿಯ ಅಭ್ಯರ್ಥಿಗಳಿಂದ 6 ತಿಂಗಳೊಳಗಾಗಿ ಕಡ್ಡಾಯವಾಗಿ ಭರ್ತಿ ಮಾಡಿಕೊಳ್ಳುವ ಷರತ್ತುಗಳನ್ನು ವಿಧಿಸಿ 5 ಉಪನ್ಯಾಸಕರು, 1 ಗ್ರಂಥಪಾಲಕರು ಹಾಗೂ 7 ಬೋಧಕೇತರ ಹುದ್ದೆಗಳನ್ನು, ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರ ತೀರ್ಮಾನಿಸಿದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 42 ಯುಪಿಸಿ 2013, ಬೆಂಗಳೂರು, ದಿನಾಂಕ: 10–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಾಮಾನ್ಯ ಆಡಳಿತ ಮಂಡಳಿಗೆ ಸೇರಿದ ಹಾಗೂ ದಿನಾಂಕ:01–07–1987ಕ್ಕಿಂತ ಪೂರ್ವದಲ್ಲಿ ಪ್ರಾರಂಭಿಸಿ ಇದುವರೆಗೂ ಸತತವಾಗಿ ನಡೆಸುತ್ತಿರುವ ತುಮಕೂರಿನ ಶ್ರೀ ಸಿದ್ದಗಂಗಾ ಶಿಕ್ಷಣ ಸಂಸ್ಥೆಯ ಆಡಳಿತಕ್ಕೊಳಪಟ್ಟಿರುವ ಶ್ರೀ ಸಿದ್ದಗಂಗಾ ಕಲಾ, ವಾಣಿಜ್ಯ ಸಂಜೆ ಕಾಲೇಜು, ತುಮಕೂರು ಈ ಕಾಲೇಜನ್ನು ಹಾಗೂ ಅಲ್ಲಿ ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿರುವ ಈ ಕೆಳಕಂಡ ಬೋಧಕ ಮತ್ತು ಬೋಧಕೇತರರನ್ನು ಅವರುಗಳು ಬೋಧಿಸುತ್ತಿರುವ ವಿಷಯ/ಹುದ್ದೆಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

**ಬೋಧಕರು**

| ಕ್ರ.ಸಂ. | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ ವಿಷಯ | ಪರಿಗಣಿಸಲಾದ ಮೀಸಲಾತಿ | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆಗಳ ಸಂಖ್ಯೆ | ಕಾರ್ಯಭಾರ |
|---|---|---|---|---|---|
| 1 | ರತ್ನಮಂಜರಿ ಕೆ.ಜಿ. | ಕನ್ನಡ ಉಪನ್ಯಾಸಕರು | ಸಾಮಾನ್ಯ | 01 | 16 ಗಂಟೆ |
| 2 | ಡಾ: ತಿಮ್ಮಪ್ಪ ಸಿ. | ಇತಿಹಾಸ ಉಪನ್ಯಾಸಕರು | ಎಸ್.ಟಿ. | 01 | 16 ಗಂಟೆ |

| ಕ್ರ.ಸಂ. | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ ವಿಷಯ | ಪರಿಗಣಿಸಲಾದ ಮೀಸಲಾತಿ | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆಗಳ ಸಂಖ್ಯೆ | ಕಾರ್ಯಭಾರ |
|---|---|---|---|---|---|
| 3 | ಮಹದೇವಸ್ವಾಮಿ ಎನ್.ಎಸ್. | ಅರ್ಥಶಾಸ್ತ್ರ ಉಪನ್ಯಾಸಕರು | ಸಾಮಾನ್ಯ | 01 | 16 ಗಂಟೆ |
| 4 | ಅರುಣಕುಮಾರಿ ಎಸ್.ಕೆ. | ರಾಜ್ಯಶಾಸ್ತ್ರ ಉಪನ್ಯಾಸಕರು | 3ಎ | 01 | 16 ಗಂಟೆ |
| 5 | ರಾಮಲಿಂಗರೆಡ್ಡಿ ಎಸ್. | ಗಣಕವಿಜ್ಞಾನ ಉಪನ್ಯಾಸಕರು | ಪ್ರವರ್ಗ–1 | 01 | 16 ಗಂಟೆ |
| 6 | ಕುಮಾರಸ್ವಾಮಿ ಹೆಚ್.ಜಿ. | ಗ್ರಂಥಪಾಲಕರು | 3ಎ | 01 | – |

**ಬೋದಕೇತರರು**

| ಕ್ರ.ಸಂ. | ವೇತನಾನುದಾನಕ್ಕೆ ಒಳಪಡಿಸಿದ ಬೋಧಕೇತರರ ಹೆಸರು | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆ | ಪ್ರವರ್ಗ |
|---|---|---|---|
| 1 | ಶ್ರೀ ಆರ್. ಪ್ರಕಾಶ | ಅಧೀಕ್ಷಕರು | ಸಾಮಾನ್ಯ |
| 2 | ಶ್ರೀಮತಿ ಭವ್ಯ ಹೆಚ್. ಸಿ. | ದ್ವಿತೀಯ ದರ್ಜೆ ಸಹಾಯಕರು | ಸಾಮಾನ್ಯ |
| 3 | ಶ್ರೀಮತಿ ಕೆ.ಬಿ. ಶಿವರಾಜಮ್ಮ | ಗ್ರಂಥಾಲಯ ಸಹಾಯಕರು | ಸಾಮಾನ್ಯ |
| 4 | ಶ್ರೀ ಸಿದ್ದೇಶ | ಅಟೆಂಡರ್ | 3ಬಿ |
| 5 | ಶ್ರೀ ನಾಗರಾಜು | ಪರಿಚಾರಕರು | ಎಸ್.ಸಿ |
| 6 | ಶ್ರೀ ನಿರಂಜನ್ ಕೆ.ಸಿ | ಪರಿಚಾರಕರು | ಸಾಮಾನ್ಯ |
| 7 | ಶ್ರೀ ಮುಕುಂದಯ್ಯ ಕೆ.ಆರ್. | ಪರಿಚಾರಕರು | 3ಎ |

**ಷರತ್ತುಗಳು:**

1) ಸದರಿ ಕಾಲೇಜು ದಿನಾಂಕ: 01–06–1987ರ ಪೂರ್ವದಲ್ಲಿ ಪ್ರಾರಂಭಿಸಿ ವಿಚ್ಛೇದನವಿಲ್ಲದೇ ಸತತವಾಗಿ ನಡೆಯುತ್ತಿರಬೇಕು.

2) ಮೀಸಲಾತಿಯನ್ವಯ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಯನ್ನು 6 ತಿಂಗಳ ಒಳಗೆ ನಿಯಮಾನುಸಾರ ನೇಮಕಾತಿ ಮಾಡಿಕೊಂಡು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಬೇಕು.

3) ಈಗಾಗಲೇ ಆಡಳಿತ ಮಂಡಳಿಯು ನೇಮಕಾತಿ ಮಾಡಿಕೊಂಡಿರುವ ಉಳಿದ ಬೋಧಕ/ಬೋಧಕೇತರ ನೌಕರರಿಗೆ ಆಡಳಿತ ಮಂಡಳಿಯೇ ವೇತನವನ್ನು ಪಾವತಿ ಮಾಡಬೇಕು.

4) ಪ್ರಸ್ತಾಪಿತ ಕಾಲೇಜು ಸಂಜೆ ಕಾಲೇಜು ಎಂದು ತಿಳಿಸಿರುವುದರಿಂದ ಸಂಬಂಧಪಟ್ಟ ಅನುದಾನಿತ ಸಂಹಿತೆಯನ್ನು ಪಾಲಿಸಿರಬೇಕು.

5) ಬೋಧಕರು/ಉಪನ್ಯಾಸಕರು/ಗ್ರಂಥಪಾಲಕರುಗಳಿಗೆ ಯುಜಿಸಿ/ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಹಾಗೂ ಇಲಾಖೆಯು ಆಗಿಂದಾಗ್ಗೆ ಹೊರಡಿಸಿರುವ ನಿಯಮಗಳನ್ವಯ ನಿಗಧಿಪಡಿಸಿದ ಕಾರ್ಯಭಾರವಿರುವ ಬಗ್ಗೆ ಖಚಿತಪಡಿಸಿಕೊಳ್ಳಬೇಕು.

6) ಈಗಾಗಲೇ ನೇಮಕಾತಿ ಆಗಿರುವ ಹಾಗೂ ಪ್ರಸ್ತುತ ವೇತನಾನುದಾನಕ್ಕೆ ಒಳಪಡುತ್ತಿರುವ ಉಪನ್ಯಾಸಕರು ಮತ್ತು ಗ್ರಂಥಪಾಲಕರು ಕಾಲಕಾಲಕ್ಕೆ ಯುಜಿಸಿ ನಿಗಧಿಪಡಿಸಿದ ವಿದ್ಯಾರ್ಹತೆ ಹೊಂದಿರಬೇಕು.

7) ನೇಮಕಾತಿಯಲ್ಲಿ ನೇಮಕಾತಿ ನಿಯಮಗಳು ಹಾಗೂ ಮೀಸಲಾತಿ ಪಾಲನೆಯ ಬಗ್ಗೆ ಸರ್ಕಾರವು ಹೊರಡಿಸಿರುವ ಹಾಗೂ ಆಗಿಂದಾಗ್ಗೆ ಹೊರಡಿಸುವ ಸೂಚನೆಗಳನ್ನು ಪಾಲನೆ ಮಾಡುವುದಾಗಿ ಸಂಬಂಧಪಟ್ಟ ಆಡಳಿತ ಮಂಡಳಿಯಿಂದ ಸ್ಟಾಂಪ್ ಪೇಪರ್‌ನಲ್ಲಿ ಮುಚ್ಚಳಿಕೆ ಬರೆಸಿಕೊಳ್ಳಬೇಕು.

8) ಬೋಧಕ ಮತ್ತು ಬೋಧಕೇತರ ಹುದ್ದೆಗಳು ಅನುದಾನ ಸಂಹಿತೆ ಹಾಗೂ ನಿಗಧಿತ ಸಿಬ್ಬಂದಿ ರೂಪಿಕೆ ಪ್ರಕಾರ ಇರುವುದನ್ನು ಖಚಿತಪಡಿಸಿಕೊಳ್ಳಬೇಕು. ಬೋಧಕ ಹುದ್ದೆಗಳ ವಿದ್ಯಾರ್ಹತೆ, ಯುಜಿಸಿ ನಿಗಧಿಪಡಿಸಿದ ನಿಯಮಗಳು ಹಾಗೂ ಜಾರಿಯಲ್ಲಿರುವ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳ ಪ್ರಕಾರ (ಸಿ&ಆರ್ ರೂಲ್ಸ್) ಇರುವುದನ್ನೂ ಸಹ ಖಚಿತಪಡಿಸಿಕೊಳ್ಳಬೇಕು.

9) ಸರ್ಕಾರದ ಆದೇಶ ಸಂಖ್ಯೆ:ಇಡಿ 146 ಯುಪಿಸಿ 79, ದಿನಾಂಕ:03–10–81 ರ ಆದೇಶದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಅನುಗುಣವಾಗಿ ಬೋಧಕೇತರ ಹುದ್ದೆಗಳನ್ನು ಮಂಜೂರು ಮಾಡಲು ಸಿಬ್ಬಂದಿ ಮಾದರಿ ರಚನೆ ಸೂಚಿಸಿದ್ದು, ಅದರಂತೆ ಪ್ರಸ್ತಾಪಿತ ಕಾಲೇಜಿಗೆ ಬೋಧಕೇತರ ಹುದ್ದೆಗಳನ್ನು ವರ್ಗೀಕರಿಸಿ ನಿಗಧಿಪಡಿಸಬೇಕಾಗುತ್ತದೆ. ಸದರಿ ಕಾಲೇಜು ಆ ಹುದ್ದೆಗಳನ್ನು ಪಡೆಯಲು ಅನುದಾನ ಸಂಹಿತೆ ಪ್ರಕಾರ/ಸರ್ಕಾರಿ ಆದೇಶದ ಪ್ರಕಾರ

ನಿಗಧಿತ ವಿದ್ಯಾರ್ಥಿಗಳ ಸಂಖ್ಯೆ ಹೊಂದಿರುತ್ತದೆ ಎಂದು ದೃಡೀಕರಿಸಬೇಕು. ಮೇಲೆ ತಿಳಿಸಿದ ಆದೇಶದ ಮಿತಿಯಲ್ಲಿ ಈಗ ಮಂಜೂರಾಗಿರುವ ಹುದ್ದೆಗಳು ಇರುವುದನ್ನು ದೃಢಪಡಿಸಿಕೊಳ್ಳಬೇಕು.

10) ಹುದ್ದೆಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಮುನ್ನ ಸಂಬಂಧಿಸಿದ ಕಾಲೇಜು ಶಿಕ್ಷಣ ಇಲಾಖೆಯಿಂದ ಪೂರ್ವಾನುಮತಿ ಪಡೆದಿರಬೇಕು. ಕಾಲೇಜು ಶಿಕ್ಷಣ ಆಯುಕ್ತರು ದಾಖಲೆಗಳನ್ನು ಪರಿಶೀಲಿಸಿ ಹುದ್ದೆ ಯಾವ ವರ್ಗಕ್ಕೆ ಮೀಸಲಾಗಿತ್ತು. ನೇಮಕ ಮಾಡಿರುವ ಅಭ್ಯರ್ಥಿ ಅದೇ ವರ್ಗಕ್ಕೆ ಸೇರಿದವರೇ ಎಂಬುದನ್ನು ದೃಡೀಕರಿಸಬೇಕು.

11) ಮೀಸಲಾತಿಗೆ ಸಂಬಂಧಿಸಿದಂತೆ ಶಿಕ್ಷಣ ಇಲಾಖೆ ಹೊರಡಿಸಿರುವ ಆದೇಶ ಸಂಖ್ಯೆ:ಇಡಿ 227 ಎಸ್‌ಇಪಿ 94, ದಿನಾಂಕ:21–04–1995 ಹಾಗೂ ಕಾಲಕಾಲಕ್ಕೆ ಹೊರಡಿಸಿರುವ ಆದೇಶಗಳು ಹಾಗೂ ಬೋಧಕೇತರ ಸಿಬ್ಬಂದಿ ವರ್ಗದವರನ್ನು ಒಂದು ಯೂನಿಟ್ ಎಂದು ಪರಿಗಣಿಸಿ, ಸಿಆಸುಇ ಆದೇಶ ಸಂಖ್ಯೆ:ಸಿಆಸುಇ 8 ಸೆಹಿಮ 95, ದಿನಾಂಕ: 20–06–1995 ರಲ್ಲಿ ನಿಗಧಿಪಡಿಸಿದ 100 ಬಿಂದುಗಳ ರೋಸ್ಟರ್ ಪ್ರಕಾರ ಮೀಸಲಾತಿ ಪಾಲಿಸಿರಬೇಕು ಇದರ ಜೊತೆಗೆ ದಿನಾಂಕ: 01–06–1992ರ ನಂತರದ ಎಲ್ಲಾ ನೇಮಕಾತಿಗಳಲ್ಲಿ ಮೀಸಲಾತಿ ಪಾಲನೆಯಾಗಿರುವ ಬಗ್ಗೆಯೂ ಸಹ ಪರಿಶೀಲಿಸಿ ದೃಢಪಡಿಸಿಕೊಳ್ಳುವುದು. ಅನಂತರವೇ ವೇತನಾನುದಾನ ನೀಡಬೇಕು.

12) ಈ ಕಾಲೇಜಿಗೆ ಸಂಬಂಧಿಸಿದಂತೆ ನೇಮಕವಾಗಿರುವ ಬೋಧಕ/ಬೋಧಕೇತರ ಹುದ್ದೆಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿ ಅಥವಾ ಇತರೆಡೆಗಳಲ್ಲಿ ಯಾವುದೇ ವಿವಾದ ಇರುವುದಿಲ್ಲ ಎಂಬುದನ್ನು ದೃಢಪಡಿಸಿಕೊಳ್ಳುವುದು.

13) ಮೇಲಿನಂತೆ ಅಗತ್ಯ ದಾಖಲೆಗಳನ್ನು ಪರಿಶೀಲಿಸಿ ದೃಢೀಕರಿಸಿ ಕ್ರಮವಹಿಸಿದ ನಂತರದ ದಿನಾಂಕದಿಂದ ವೇತನಾನುದಾನ ಜಾರಿಗೊಳಿಸುವುದು. ಯಾವುದೇ ಕಾರಣಕ್ಕೂ ಅನುದಾನರಹಿತ ಹಿಂದಿನ ಸೇವಾವಧಿಯನ್ನು ರಜೆ, ಪಿಂಚಣಿಗೆ ಪರಿಗಣಿಸಬಾರದು.

14) ಸದರಿ ಕಾಲೇಜಿನ ಬೋಧಕ/ಬೋದಕೇತರ ಸಿಬ್ಬಂದಿಯನ್ನು ವೇತನಾನುದಾನಕ್ಕೆ ಒಳಪಡಿಸಿ ತಗಲುವ ವೆಚ್ಚವನ್ನು ಕಾಲೇಜು ಶಿಕ್ಷಣ ಇಲಾಖೆಗೆ ಒದಗಿಸಿದ ಯೋಜನಾ ಅನುದಾನದ ಮಿತಿಯಲ್ಲಿಯೇ ಭರಿಸಬೇಕು.

15) ಸಿಬ್ಬಂದಿಯ ಸೇವಾ ಭದ್ರತೆಯನ್ನು ಒದಗಿಸುವ ಬಗ್ಗೆ ಹೆಚ್.ಆರ್.ಎಂ.ಎಸ್ ನಲ್ಲಿ ಅಳವಡಿಸಬೇಕು.

16) ಆರ್ಥಿಕ /ಶಿಕ್ಷಣ ಇಲಾಖೆ ನಿಗಧಿಪಡಿಸಿರುವ ಎಲ್ಲಾ ಷರತ್ತುಗಳು/ನಿಯಮಗಳು/ಅನುದಾನ ಸಂಹಿತೆಯಲ್ಲಿ ನಿಗಧಿಪಡಿಸಿರುವ ಷರತ್ತುಗಳನ್ನು ಪಾಲಿಸಿರುವುದನ್ನು ಖಚಿತಪಡಿಸಿಕೊಳ್ಳಬೇಕು.

17) The Karnataka Educational Institutions (Recruitment terms and conditions etc.,) Rules 1999 ಅನುಬಂಧ–II ರಲ್ಲಿ benefits not available for service rendered during the un-aided period for purpose of fixation of pay, leave and pension or any other service benefits by the Government. ಈ ನಿಯಮಗಳನ್ವಯ ಉಪನ್ಯಾಸಕರು ಮತ್ತು ಬೋಧಕೇತರ ಅನುದಾನರಹಿತ ಅವಧಿಯಲ್ಲಿ ಸಲ್ಲಿಸಿದ ಸೇವೆಯನ್ನು ಪಿಂಚಣಿ, ವೇತನ ಬಾಕಿ ಅಥವಾ ಇನ್ನಾವುದೇ ಸೇವಾ ಸೌಲಭ್ಯಗಳಿಗೆ ಪರಿಗಣಿಸಲಾಗುವುದಿಲ್ಲ ಎಂಬ ಷರತ್ತಿಗೆ ಬದ್ಧನಾಗಿರುತ್ತೇನೆಂದು ವೇತನಾನುದಾನಕ್ಕೆ ಒಳಪಡುವ ಬೋಧಕ ಮತ್ತು ಬೋಧಕೇತರ ನೌಕರರಿಂದ ₹.100/–ರ ಸ್ಟಾಂಪ್ ಪೇಪರ್‌ನಲ್ಲಿ ಮುಚ್ಚಳಿಕೆ ಪತ್ರವನ್ನು ಕಾಲೇಜು ಶಿಕ್ಷಣ ಇಲಾಖೆಯು ಬರೆಸಿಕೊಂಡು ನಂತರವೇ ವೇತನಾನುದಾನ ಬಿಡುಗಡೆ ಮಾಡಲು ಕ್ರಮವಹಿಸಬೇಕು.

18) ಆಡಳಿತ ಮಂಡಳಿಯಲ್ಲಿ ಯಾವುದೇ ರೀತಿಯ ವ್ಯಾಜ್ಯ ಇರತಕ್ಕದ್ದಲ್ಲ. ಒಂದು ವೇಳೆ ಅಂತಹ ವ್ಯಾಜ್ಯ ಇದ್ದಲ್ಲಿ ಅಂತಹ ಸಂಸ್ಥೆಯನ್ನು ಅನುದಾನಕ್ಕೆ ಒಳಪಡಿಸಲು ಅರ್ಹತೆ ಪಡೆಯುವುದಿಲ್ಲ.

19) ಕರ್ನಾಟಕ ಸಂಘಗಳ ನೋಂದಣಿ ನಿಯಮಾವಳಿಯಲ್ಲಿ ನಮೂದಿಸಿರುವ ಅವಕಾಶಗಳ ಪ್ರಕಾರ ಪ್ರತಿ ವರ್ಷ ಆಡಿಟ್ ನಡೆಸಿ ವರದಿಯನ್ನು ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸಬೇಕು ಹಾಗೂ ಸಂಬಂಧಿಸಿದ ಕಾಲೇಜು ಶಿಕ್ಷಣ ಆಯುಕ್ತರಿಗೆ ಮತ್ತು ಪ್ರಾದೇಶಿಕ ಜಂಟಿ ನಿರ್ದೇಶಕರಿಗೆ ಮಾಹಿತಿಗಾಗಿ ಸಂಘದ ಕಾರ್ಯಕಾರಿ ಸದಸ್ಯರ ಅಧಿಕೃತ ಪಟ್ಟಿಯನ್ನು ಸಲ್ಲಿಸಬೇಕು (ಸಕ್ಷಮ ಪ್ರಾಧಿಕಾರದಿಂದ ದೃಢೀಕರಿಸಲ್ಪಟ್ಟಿರಬೇಕು).

20) ಒಂದು ವೇಳೆ ಈ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಟ್ಟ ಯಾವುದೇ ಬೋಧಕ/ಬೋಧಕೇತರರುಗಳ ಪೈಕಿ ನಿಯಮಾನುಸಾರ ಯಾವುದೇ ಅನರ್ಹತೆ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ, ವೇತನಾನುದಾನವನ್ನು ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

21) ವೇತನಾನುದಾನದ ವ್ಯಾಪ್ತಿಗೆ ಒಳಪಟ್ಟಂತಹ ಮೇಲ್ಕಂಡ ಉಪನ್ಯಾಸಕರುಗಳ/ಬೋಧಕೇತರರ ವೇತನವನ್ನು ಕಾಲೇಜು ಶಿಕ್ಷಣ ಇಲಾಖೆಯು ಷರತ್ತುಗಳನ್ನು ಪೂರೈಸಿರುವುದನ್ನು ಖಚಿತಪಡಿಸಿ ಚಾಲನಾದೇಶ ಹೊರಡಿಸಿದ ದಿನಾಂಕದಿಂದ ವೇತನ ಶ್ರೇಣಿಯ ಕನಿಷ್ಠ ಮೂಲ ವೇತನವನ್ನು ನಿಗಧಿಪಡಿಸಬೇಕು.

22) ವೇತನಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರುಗಳ/ಬೋದಕೇತರರ ಕಾರ್ಯಭಾರದಲ್ಲಿ ಕೊರತೆ ಉದ್ಭವಿಸಿದ ಪಕ್ಷದಲ್ಲಿ ಅಂತಹ ಉಪನ್ಯಾಸಕರು/ಬೋಧಕೇತರರನ್ನು ಕಾರ್ಯಭಾರ ಇರುವಂತಹ ಅನುದಾನಿತ ಕಾಲೇಜು/ಸರ್ಕಾರಿ ಕಾಲೇಜುಗಳ ಕಾರ್ಯಭಾರದ ಎದುರಾಗಿ ನಿಯೋಜನೆ ಮೇಲೆ ಮರು ಹಂಚಿಕೆ ಮಾಡುವ ಷರತ್ತಿಗೊಳಪಟ್ಟಿದೆ.

23) ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು, 2003 ರ ನಿಯಮ 15(ಇ) ರಡಿಯಲ್ಲಿ ನಿಗಧಿಪಡಿಸಿರುವ ಅಪೆಂಡಿಕ್ಸ್ (2)ರಲ್ಲಿ ಸೂಚಿಸಿರುವಂತೆ ಬೋಧನಾ ಕೊಠಡಿಗಳು, ಪ್ರಯೋಗಾಲಯಗಳು, ಶೌಚಾಲಯ ಇತ್ಯಾದಿ ಮೂಲಭೂತ ಸೌಕರ್ಯಗಳನ್ನು ಒಳಗೊಂಡಿರಬೇಕು.

24) ವಿಶ್ವವಿದ್ಯಾಲಯದವರು ನಿಗಧಿಪಡಿಸಿರುವ ಸರಾಸರಿ ಪ್ರವೇಶಾತಿಗೆ ಸಮಾನಾಂತರವಾಗಿ ಈ ಕಾಲೇಜುಗಳು ಕನಿಷ್ಠ ಪ್ರವೇಶಾತಿಯನ್ನು ಮಾಡಿಕೊಳ್ಳತಕ್ಕದ್ದು ಮತ್ತು ಪ್ರವೇಶಾತಿ (enrollment) ಪಡೆದ ಕಾಲೇಜಿನ ವಿದ್ಯಾರ್ಥಿಗಳ ಪೈಕಿ ಕನಿಷ್ಠ ಶೇಕಡ 75 ರಷ್ಟು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುವಂತೆ ಕ್ರಮವಹಿಸತಕ್ಕದ್ದು, ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

25) ಇಂತಹ ಕಾಲೇಜುಗಳಲ್ಲಿನ ಪರೀಕ್ಷಾ ಫಲಿತಾಂಶಗಳು ಸಂಬಂಧಪಟ್ಟ ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಇತರೆ ಕಾಲೇಜುಗಳಲ್ಲಿನ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಇರತಕ್ಕದಲ್ಲ. ತಪ್ಪಿದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

26) ಈ ರೀತಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಾರಂಭವಾದ ಪದವಿ ಕಾಲೇಜುಗಳು ಇನ್ನು ಮುಂದೆ ಮಧ್ಯದಲ್ಲಿ ಯಾವುದೇ ವಿಚ್ಛಿನ್ನತೆ ಇಲ್ಲದೆ ಸತತವಾಗಿ ನಡೆಸಿರಬೇಕು, ವಿಚ್ಛಿನ್ನತೆ ಉಂಟಾದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

27) ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ಮತ್ತು ಇತರ ಸಂಬಂಧಿತ ನಿಯಮಗಳಡಿಯಲ್ಲಿ ನಿಗಧಿಪಡಿಸಿರುವಂತೆ ಮಾದರಿ ಸಿಬ್ಬಂದಿಯನ್ವಯ ನೇಮಕಾತಿ ಮಾಡಿಕೊಳ್ಳತಕ್ಕದ್ದು. ಪ್ರತಿಯೊಂದು ತರಗತಿಯಲ್ಲಿ ನಿಗಧಿತ ಕನಿಷ್ಠ ಮಟ್ಟದ ವಿದ್ಯಾರ್ಥಿ ಹಾಜರಾತಿ ಸಂಖ್ಯಾಬಲವನ್ನು ಹೊಂದಿರತಕ್ಕದ್ದು. ಪ್ರತಿಯೊಂದು ತರಗತಿಯಲ್ಲಿ ಕನಿಷ್ಠ 40 ವಿದ್ಯಾರ್ಥಿಗಳ ಹಾಜರಾತಿ ಕಡ್ಡಾಯವಾಗಿರಬೇಕು. ಭಾಷಾ ವಿಷಯದಲ್ಲಿ ಕನಿಷ್ಠ 10 ವಿದ್ಯಾರ್ಥಿಗಳೂ ಹಾಗೂ ಐಚ್ಛಿಕ ವಿಷಯಗಳಿಗೆ ಕನಿಷ್ಠ 15 ವಿದ್ಯಾರ್ಥಿಗಳ ಸಂಖ್ಯೆ ಇರಬೇಕು.

28) ನಿಗಧಿತ ಮೂಲಭೂತ ಸೌಲಭ್ಯಗಳಲ್ಲದೆ ಸ್ವಂತ ಕಟ್ಟಡ ಮತ್ತು ಆಟದ ಮೈದಾನಗಳನ್ನು ಹೊಂದಿರತಕ್ಕದ್ದು. ಇವುಗಳನ್ನು ಹೊಂದದೇ ಇರುವ ಸಂಸ್ಥೆಗಳ ಪ್ರಕರಣಗಳಲ್ಲಿ ಈ ಮೂಲಭೂತ ಸೌಲಭ್ಯಗಳನ್ನು ಜರೂರಾಗಿ ಹೊಂದುವ ಷರತ್ತಿಗೆ ಒಳಪಟ್ಟಿರುತ್ತದೆ.

29) ಇನ್ನು ಮುಂದೆ ಭವಿಷ್ಯಾನುಸಾರ ಭರ್ತಿ ಮಾಡಬೇಕಾಗಿರುವ ಹುದ್ದೆಗಳಿಗೆ ಸಕ್ಷಮ ಅಧಿಕಾರಿಯಿಂದ ಪೂರ್ವಾನುಮತಿ ಪಡೆಯದೇ ಮಾಡತಕ್ಕದ್ದಲ್ಲ.

30) ನೇರ ನೇಮಕಾತಿ ಬಡ್ತಿ ಮತ್ತು ವಿದ್ಯಾರ್ಥಿಗಳ ಪ್ರವೇಶದ ವಿಷಯದಲ್ಲಿ ಕಾಲಕಾಲಕ್ಕೆ ಹೊರಡಿಸುವ ಸರ್ಕಾರದ ನಿಯಮಗಳು/ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು.

31) ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾದ ಬೋಧಕ/ಬೋಧಕೇತರ ಹುದ್ದೆಗಳನ್ನು ತುಂಬುವಾಗ ಸರ್ಕಾರದ ಪೂರ್ವಾನುಮತಿ ಪಡೆಯುವುದು ಮತ್ತು ಸರ್ಕಾರದ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು.

32) ಅನುಮೋದಿತ ಹುದ್ದೆಗಳಿಗೆ ವೇತನಾನುದಾನ ಬಿಡುಗಡೆ ಮಾಡುವ ಮುನ್ನ ಸರ್ಕಾರದ ಮತ್ತು ಯುಜಿಸಿ ನಿಯಮಗಳ ಪ್ರಕಾರ ವಯೋಮಿತಿ, ವಿದ್ಯಾರ್ಹತೆ ಮತ್ತಿತರ ಷರತ್ತುಗಳನ್ನು ಪೂರೈಸಿರುವ ಬಗ್ಗೆ ಖಚಿತಪಡಿಸಿಕೊಳ್ಳಬೇಕು.

33) ಸದರಿ ಕಾಲೇಜಿನಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿರುವಂತಹ ಬೋಧಕ/ ಬೋಧಕೇತರರ ವೇತನವನ್ನು ಪ್ರಥಮ 5 ವರ್ಷಗಳ ಅವಧಿಗೆ ಇಲಾಖೆಗೆ ನಿಗಧಿಪಡಿಸಲಾದ ಯೋಜನೆ ಹಂಚಿಕೆಯಲ್ಲಿಯೇ ವೆಚ್ಚ ಭರಿಸಬೇಕು.

34) ಆಡಳಿತ ಮಂಡಳಿಯವರು ಒಪ್ಪಂದದಲ್ಲಿನ ಹಾಗೂ ಮೇಲೆ ಹೇಳಲಾದ ಎಲ್ಲಾ ಅಥವಾ ಯಾವುದೇ ಒಂದು ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದರೆ ಅಥವಾ ತಪ್ಪು ಲೆಕ್ಕ ಪತ್ರಗಳನ್ನು ಅಥವಾ ತಪ್ಪು ದಾಖಲೆಗಳನ್ನು ಒದಗಿಸಿದರೆ ಅಥವಾ ತಪ್ಪು ಮಾಹಿತಿಗಳನ್ನು ನೀಡಿದರೆ ಅಥವಾ ಯಾವುದೇ ಮೋಸ ಎಸಗಿರುವುದು ಕಂಡು ಬಂದಲ್ಲಿ ಸರ್ಕಾರವು ಆಡಳಿತ ಮಂಡಳಿಗೆ ಅಥವಾ ಸಿಬ್ಬಂದಿಗೆ ಈ ಕರಾರಿನ ಮೇರೆಗೆ ಈಗಾಗಲೇ ನೀಡಲಾದ ಪೂರ್ಣ ಅಥವಾ ಭಾಗಶಃ ಅನುದಾನವನ್ನು ಮುಂದುವರೆಸದಿರುವ ಅಥವಾ ತಡೆಹಿಡಿಯುವ ಹಾಗೂ ಈ ಕರಾರಿನ ಮೇರೆಗೆ ಸರ್ಕಾರಕ್ಕೆ ಬಾಕಿ ಎಂದು ಕಂಡು ಬಂದ ಮೊಬಲಗನ್ನು ಆಡಳಿತ ಮಂಡಳಿಯಿಂದ ವಸೂಲು ಮಾಡುವ ಅಧಿಕಾರವನ್ನು ಹೊಂದಿರುತ್ತದೆ.

35) ಆಡಳಿತ ಮಂಡಳಿಯು ಈ ಆದೇಶದ ಪ್ರಕಾರ (Document Sheet) ದಲ್ಲಿ ನೋಟರಿಯವರ ಮುಂದೆ ಪ್ರಮಾಣೀಕರಿಸಿದ ಕರಾರು ಪತ್ರವನ್ನು ನೀಡತಕ್ಕದ್ದು. ಈ ಕರಾರು ಪತ್ರವನ್ನು ನೀಡಿದ ನಂತರವೇ ಅನುದಾನ ಪಾವತಿ ಮಾಡಲು ಕ್ರಮ ತೆಗೆದುಕೊಳ್ಳಬೇಕು.

36) ಈ ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವ ಕುರಿತು ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ರವರು ಖಚಿತಪಡಿಸಿಕೊಂಡ ನಂತರವೇ ಆಯಾ ವರ್ಷದ ವೇತನಾನುದಾನ ಮತ್ತು ಸದರಿ ಬೋಧಕ/ಬೋಧಕೇತರ ಸಿಬ್ಬಂದಿಗೆ ವೇತನ ಬಿಡುಗಡೆ ಮಾಡತಕ್ಕದ್ದು. ನ್ಯೂನತೆಗಳು ಕಂಡು ಬಂದಲ್ಲಿ ಆಯುಕ್ತರು, ಕಾಲೇಜು ಶಿಕ್ಷಣ ಇಲಾಖೆ ರವರು ಜವಾಬ್ದಾರರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 238 ವೆಚ್ಚ–8/2014, ದಿನಾಂಕ: 01–03–2014ರಲ್ಲಿ ನೀಡಿರುವ ಷರತ್ತು ಹಾಗೂ ಸಹಮತಿಯನ್ವಯ ಹೊರಡಿಸಲಾಗಿದೆ.

**PR. 635**

**SC. 100**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶಿವಲಿಂಗಯ್ಯ.**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಕಾಲೇಜು ಶಿಕ್ಷಣ)

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಡಿ ಬರುವ ಕ್ಷೇತ್ರ ಇಲಾಖೆಗಳು/ನಿಗಮ/ಮಂಡಳಿಗಳಿಗೆ ಮುಖ್ಯ ಜಾಗೃತ ಅಧಿಕಾರಿ (Vigilance Officer) ಹಾಗೂ ಜಾಗೃತ ಅಧಿಕಾರಿ (Vigilance Officer)ಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 14 ಸೇಲೋಯ 2016, ದಿ:14–03–2016.

2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 88 ಸೇಲೋಯ 2016, ದಿ:23–06–2016.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿ:14–03–2016ರ ಆದೇಶದನ್ವಯ, ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ, 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (**Anti Corruption Bureau**) ಸೃಜಿಸಲಾಗಿದೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ದಿ: 22–06–2016ರ ಆದೇಶದಲ್ಲಿ ಭ್ರಷ್ಟಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ದಿ: 14–03–2016ರ ಸರ್ಕಾರದ ಆದೇಶದಲ್ಲಿನ ಆದೇಶ ಭಾಗದ ಕಂಡಿಕೆ 7ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ದಿನಾಂಕ:22–06–2016ರ ಆದೇಶದಲ್ಲಿ, ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳ ಕೇಂದ್ರಸ್ಥಾನದ ಕಛೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದೆಂದೂ ಹಾಗೂ ಆಯಾ ಇಲಾಖೆ/ಸಂಸ್ಥೆಗಳ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer next in seniority) ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿ (Chief Vigilance Officer)ಯನ್ನಾಗಿ ನೇಮಿಸಲು ಹಾಗೂ ವಿಭಾಗ/ಜಿಲ್ಲಾ ಮಟ್ಟದ ಕಛೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದು. ಈ ಜಾಗೃತ ಕೋಶಕ್ಕೆ ಜಾಗೃತ ಅಧಿಕಾರಿ(Vigilance Officer) ಮುಖ್ಯಸ್ಥರಾಗಿದ್ದು, ಸದರಿ ವಿಭಾಗ/ಜಿಲ್ಲಾ ಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿಯನ್ನು (Officer next in seniority) ಜಾಗೃತ ಅಧಿಕಾರಿ (Vigilance Officer) ಯನ್ನಾಗಿ ನೇಮಿಸಲು ಆದೇಶಿಸಲಾಗಿರುತ್ತದೆ. ಅದರಂತೆ ಪರಿಶೀಲಿಸಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಡಿ ಬರುವ ಕ್ಷೇತ್ರ ಇಲಾಖೆಗಳು/ನಿಗಮ/ಮಂಡಳಿಗಳಿಗೆ ಸಂಬಂಧಿಸಿದಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಲೋಇ 102 ಸ್ವೀಮರ 2016, ಬೆಂಗಳೂರು, ದಿನಾಂಕ:05–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಕ್ಷೇತ್ರ ಇಲಾಖೆಗಳು/ನಿಗಮ/ಮಂಡಳಿಗಳಿಗೆ ಸಂಬಂಧಿಸಿದಂತೆ ಕೇಂದ್ರ ಕಛೇರಿ ಹಾಗೂ ಜಿಲ್ಲಾ ಮಟ್ಟದ ಕಛೇರಿಗಳಲ್ಲಿನ ಜಾಗೃತ ಕೋಶಕ್ಕೆ ಮುಖ್ಯ ಜಾಗೃತ ಅಧಿಕಾರಿ(Chief Vigilance Officer) ಮತ್ತು ವಿಭಾಗ/ಜಿಲ್ಲಾ ಮಟ್ಟದ ಕಛೇರಿಗೆ ಜಾಗೃತ ಅಧಿಕಾರಿ(Vigilance Officer)ಯನ್ನು ಈ ಕೆಳಕಂಡ ಪಟ್ಟಿಯಲ್ಲಿ ತೋರಿಸಿದಂತೆ ನೇಮಿಸಿ ಆದೇಶಿಸಲಾಗಿದೆ.

| ಕ್ರ.ಸಂ. | ಇಲಾಖೆ/ನಿಗಮ/ಮಂಡಳಿ | ಮುಖ್ಯ ಜಾಗೃತ ಅಧಿಕಾರಿ | ಜಾಗೃತ ಅಧಿಕಾರಿ |
|---|---|---|---|
| 1. | ಮುಖ್ಯ ವಾಸ್ತುಶಿಲ್ಪಿ, ವಾಸ್ತುಶಿಲ್ಪಿ ಇಲಾಖೆ, ಬೆಂಗಳೂರು. | ಉಪ ಮುಖ್ಯ ವಾಸ್ತುಶಿಲ್ಪಿ (D.C.Arct) | ಉಪ ವಾಸ್ತುಶಿಲ್ಪಿ (D.Arct) |
| 2. | ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ದಕ್ಷಿಣ), ಬೆಂಗಳೂರು ಅ.ಇ, C&B(S) | ಅಧೀಕ್ಷಕ ಇಂಜಿನಿಯರ್ (ವಿನ್ಯಾಸ) | ವಿಭಾಗ/ಜಿಲ್ಲಾಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿ (ತಾಂ.ಸ/ಸ.ಕಾಇಂ) |
| 3. | ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ಉತ್ತರ), ಧಾರವಾಡ ಅ.ಇ, C&B(N) | ಅಧೀಕ್ಷಕ ಇಂಜಿನಿಯರ್ (ವಿನ್ಯಾಸ) | ವಿಭಾಗ/ಜಿಲ್ಲಾಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿ (ತಾಂ.ಸ/ಸ.ಕಾಇಂ) |
| 4. | ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು(ಈಶಾನ್ಯ), ಕಲಬುರಗಿ ಅ.ಇ, C&B(E) | ಅಧೀಕ್ಷಕ ಇಂಜಿನಿಯರ್ (ವಿನ್ಯಾಸ) | ವಿಭಾಗ/ಜಿಲ್ಲಾಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿ (ತಾಂ.ಸ/ಸ.ಕಾಇಂ) |

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



| ಕ್ರ.ಸಂ. | ಇಲಾಖೆ/ನಿಗಮ/ಮಂಡಳಿ | ಮುಖ್ಯ ಜಾಗೃತ ಅಧಿಕಾರಿ | ಜಾಗೃತ ಅಧಿಕಾರಿ |
|---|---|---|---|
| 5. | ಮುಖ್ಯ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿಗಳು, ಬೆಂಗಳೂರು, ಅ.ಇ, (NH) | ಅಧೀಕ್ಷಕ ಇಂಜಿನಿಯರ್ (ವಿನ್ಯಾಸ) | ವಿಭಾಗ/ಜಿಲ್ಲಾಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿ (ತಾಂ.ಸ/ಸ.ಕಾಇಂ) |
| 6. | ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಕಾರವಾರ. Dirt, Ports, K | ಸಹಾಯಕ ಆಡಳಿತಾಧಿಕಾರಿ(AAO) | ಬಂದರು ಅಧಿಕಾರಿ |
| 7. | ಮುಖ್ಯ ಯೋಜನಾಧಿಕಾರಿ, ಯೋಜನಾ ಅನುಷ್ಠಾನ ಘಟಕ, ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ, ಬೆಂಗಳೂರು. ಐಖಙೂಖಕ | ಮುಖ್ಯ ಇಂಜಿನಿಯರ್ | ವಿಭಾಗ/ಜಿಲ್ಲಾಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿ (ತಾಂ.ಸ/ಸ.ಕಾಇಂ) |
| 8. | ಮುಖ್ಯ ಯೋಜನಾಧಿಕಾರಿ, ರಾಜ್ಯ ರಸ್ತೆ ಅಭಿವೃದ್ಧಿ ಯೋಜನೆ, ಬೆಂಗಳೂರು SHDP | ಮುಖ್ಯ ಇಂಜಿನಿಯರ್ | ವಿಭಾಗ/ಜಿಲ್ಲಾಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿ (ತಾಂ.ಸ/ಸ.ಕಾಇಂ) |
| 9. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು KRDCL | ಮುಖ್ಯ ಇಂಜಿನಿಯರ್ | ವಿಭಾಗ/ಜಿಲ್ಲಾಮಟ್ಟದ ಕಛೇರಿಯ ಮುಖ್ಯಸ್ಥರ ನಂತರದ ಅಧಿಕಾರಿ (ತಾಂ.ಸ/ಸ.ಕಾಇಂ) |
| 10. | ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ನಿರ್ಮಾಣ ನಿಗಮ ನಿಯಮಿತ, ಬೆಂಗಳೂರು KSCC | ಪ್ರಧಾನ ವ್ಯವಸ್ಥಾಪಕರು | ಸಹಾಯಕ ಇಂಜಿನಿಯರ್ |
| 11. | ಯೋಜನ ಮತ್ತು ಆಸ್ತಿ ನಿರ್ವಹಣಾ ಕೇಂದ್ರ(PRAMC) | ಅಧೀಕ್ಷಕ ಇಂಜಿನಿಯರ್ | ಸ.ಕಾ.ಇಂ |

**PR. 636**

**SC. 200**

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮರಿಯಪ್ಪ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು

ಜಲಸಾರಿಗೆ ಇಲಾಖೆ.(ಸಮನ್ವಯ)

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59.